# ಹಜ್ರತ್ ಇಬ್ರಾಹೀಮ್(ಅ)
# ತ್ಯಾಗೋಜ್ವಲ ಬದುಕು

✍ ಸಮೀನಾ ಅಫ್ಶಾನ್

ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಹಝ್ರತ್ ಇಬ್ರಾಹೀಮ್(ಅ) ಹುಟ್ಟಿದ ಕುಟುಂಬ, ಬೆಳೆದ ಪರಿಸರ, ಬದುಕುತ್ತಿದ್ದ ನಾಡಿನ ಜನತೆ ಮೂರ್ತಿ ಆರಾಧಕರಾಗಿದ್ದರು. ಆ ನಾಡಿನ ಚಕ್ರಾಧಿಪತಿಯಾಗಿದ್ದ ನಮ್ರೂದ್‌ನ ದರ್ಬಾರಿನಲ್ಲಿ ಇಬ್ರಾಹೀಮ್‌ರ ತಂದೆ 'ಆಝರ್' ಆಸ್ಥಾನ ಪುರೋಹಿತರಾಗಿದ್ದರು. ಮಾತ್ರವಲ್ಲ ಆತ ಮೂರ್ತಿಗಳ ಕೆತ್ತನೆಯ ಶಿಲ್ಪಿ ಮತ್ತು ಅವುಗಳ ದೈತ್ಯ ಉದ್ಯಮಿಯಾಗಿದ್ದ. ಇಬ್ರಾಹೀಮ್(ಅ)ರಿಗೆ ಬಾಲ್ಯದಿಂದಲೇ ಇವುಗಳೊಂದಿಗೆ ತಿರಸ್ಕಾರ ಭಾವವಿತ್ತು. "ಆಲಿಸಲಾಗದ, ನೋಡಲಾಗದ ಮತ್ತು ಯಾವುದೇ ಪ್ರಯೋಜನಕ್ಕೆ ಬಾರದ ಮೂರ್ತಿಗಳು ಪೂಜಾರ್ಹವಾಗುವುದು ಹೇಗೆ" ? ಎಂಬ ಇಬ್ರಾಹೀಮರ ಸತ್ಯಾನ್ವೇಷಣೆಯ ಪಥವು ನೇರವಾಗಿ ತಂದೆಯ ನಂಬಿಕೆಗೆ ಮತ್ತು ಅಲ್ಲಿಯ ವ್ಯವಸ್ಥೆಗೆ ಸವಾಲಾಗಿ ನಿಲ್ಲುತ್ತದೆ. ಇದರಿಂದ ಕೋಪಗೊಂಡ ತಂದೆ ಆಝರ್, ಮಗನನ್ನು ಕೊಲ್ಲುವ ಬೆದರಿಕೆ ಹಾಕಿ ಮನೆಯಿಂದಲೇ ಹೊರಹಾಕುತ್ತಾರೆ.

ಜನರು ಆರಾಧಿಸುವ ಪ್ರಕೃತಿಯ ವಸ್ತುಗಳು, ಅಸಹಾಯಕ ಮೂರ್ತಿಗಳು ಮತ್ತು ಆಕಾಶಕಾಯಗಳ ಕಡೆ ಅವರ ಚಿಂತಾಕ್ರಾಂತ ನೋಟವು ಸತ್ಯದ ಪರಮಾರ್ಥವನ್ನು ಗ್ರಹಿಸುವಂತೆ ಮಾಡಿತು, ಅವೆಲ್ಲವೂ ದೇವನಲ್ಲ. ಇವುಗಳನ್ನು ಸೃಷ್ಟಿಸಿ ಪರಿಪಾಲಿಸುವ ಸೃಷ್ಟಿಕರ್ತನೊಬ್ಬನಿದ್ದಾನೆ ಎಂಬ 'ಸತ್ಯ' ಮನಗಂಡು ಆತನಿಗೆ ಶರಣಾಗಿ ಜೀವಿಸುದರಲ್ಲೇ ಮಾನವನ ಯಶಸ್ಸು ಪ್ರಾಪ್ತವಿದೆ ಎಂಬ ದೃಢವಾದ ವಿಶ್ವಾಸ ಹೊಂದಿದರು ಮತ್ತು ಜನತೆಯ ಮುಂದೆ ಅದನ್ನು ಘೋಷಿಸಿದರು.

ಇಬ್ರಾಹೀಮ್(ಅ)ರು ದೃಢವಿಶ್ವಾಸ, ತ್ಯಾಗ, ಎಣೆಯಿಲ್ಲದ ಬದ್ಧತೆ ಮತ್ತು ಅಪಾರವಾದ ತಾಳ್ಮೆಯ ಒಡೆಯರಾಗಿದ್ದರು. ಬದುಕಿನುದ್ದಕ್ಕೂ ಅನೇಕ ಕಷ್ಟಕಾರ್ಪಣ್ಯಗಳ ಮಹಾಪೂರವನ್ನೇ ಎದುರಿಸಿ ಅವುಗಳನ್ನೆಲ್ಲಾ ಜಯಿಸಿ ವಿಜಯಶಾಲಿಯಾಗಿ ಹೊರಹೊಮ್ಮಿದರು. ಸೃಷ್ಟಿಕರ್ತನು ಅವರಿಗೆ ನೀಡಿದ ಸರ್ವರೀತಿಯ ಪರೀಕ್ಷೆಗಳನ್ನೆದುರಿಸಿ ಇತಿಹಾಸದ ಪುಟದಲ್ಲಿ ಅಜೇಯರಾಗಿ ಉಳಿದರು.

"ಹಝ್ರತ್ ಇಬ್ರಾಹೀಮ್(ಅ) ತ್ಯಾಗೋಜ್ವಲ ಬದುಕು" ಎಂಬ ಈ ಕೃತಿಯಲ್ಲಿ ಒಂದು ಸಂಪೂರ್ಣ ನಾಗರೀಕತೆಯ ಉಗಮ, ಇಬ್ರಾಹೀಮ್(ಅ)ರ ಜೀವನದ ಅನೇಕ ರೋಮಾಂಚನಕಾರಿ ಘಟನೆಗಳು, ಅವರ ವಿಶ್ವಾಸದ ಉತ್ತುಂಗತೆಯ ವಿಜಯಗಾಥೆಯನ್ನು ಲೇಖಕಿ ಸಹೋದರಿ ಸಮೀನಾ ಅಫ್ಝಾನ್ ಬಹಳ ಸರಳ ಸುಂದರವಾಗಿ ಮತ್ತು ಮನೋಜ್ಞವಾಗಿ ವಿವರಿಸಿದ್ದಾರೆ. ಇದನ್ನು ಅಲ್ಲಾಹನು ಸತ್ಕರ್ಮವಾಗಿ ಸ್ವೀಕರಿಸಲಿ. ಈ ಕೃತಿಯ ಅಧ್ಯಯನವು ಪ್ರವಾದಿ ಇಬ್ರಾಹೀಮ್(ಅ)ರ ಮತ್ತು ಅವರ ಕುಟುಂಬದ ಜೀವನಾದರ್ಶವನ್ನು ಮೈಗೂಡಿಸಿಕೊಳ್ಳಲು ಸರ್ವರಿಗೂ ಪ್ರೇರಕವಾಗಲಿ ಎಂದು ಹಾರೈಸುತ್ತೇವೆ.

ಶಾಂತಿ ಪ್ರಕಾಶನ

# ಅನುಕ್ರಮಣಿಕೆ

وَمَنْ يَّرْغَبُ عَنْ مِّلَّةِ اِبْرٰهٖمَ اِلَّا مَنْ سَفِهَ
نَفْسَهٗ ؕ وَلَقَدِ اصْطَفَيْنٰهُ فِى الدُّنْيَا ۚ وَاِنَّهٗ
فِى الْاٰخِرَةِ لَمِنَ الصّٰلِحِيْنَ ﴿١٣٠﴾

ಇಬ್‌ರಾಹೀಮ್ರರ ಸಂಪ್ರದಾಯವನ್ನು ತಿರಸ್ಕರಿಸುವವನಾರು?
ತನ್ನನ್ನು ತಾನೇ ಮೂರ್ಖತನದಲ್ಲಿ ಸಿಲುಕಿಸಿಕೊಂಡಾತನ
ಹೊರತು ಬೇರಾರು ಹೀಗೆ ಮಾಡಬಲ್ಲರು?
ಇಬ್‌ರಾಹೀಮರನ್ನು ಇಹಲೋಕದಲ್ಲಿ ನಮ್ಮ ಕಾರ್ಯಕ್ಕಾಗಿ
ನಾವು ಆಯ್ಕೆ ಮಾಡಿಕೊಂಡಿದ್ದೆವು. ಪರದಲ್ಲಿ ಅವರು
ಸಜ್ಜನರೊಂದಿಗೆ ಇರುವರು.

(ಪವಿತ್ರ ಕುರ್‌ಆನ್,2:130)

# ‘ಉರ್’ ನಗರದ ಬಾಲಕ

**ಸು**ಮಾರು ನಾಲ್ಕು ಸಾವಿರ ವರ್ಷಗಳ ಹಿಂದೆ ಮೆಸಪೊಟೇಮಿಯಾ ದೇಶದಲ್ಲಿ (ಇಂದಿನ ಇರಾಕ್) ‘ಉರ್’ ಎಂಬ ಒಂದು ಪ್ರಮುಖ ನಗರವಿತ್ತು. ಅದು ಪ್ರಸಿದ್ಧ ಬ್ಯಾಬಿಲೋನಿಯಾ ನಗರದ ಸಮೀಪದಲ್ಲೇ ನೆಲೆಗೊಂಡಿತ್ತು. ಇಂದಿನ ಇರಾಕಿನಲ್ಲಿ ಈ ‘ಉರ್’ ನಗರವನ್ನು ‘ತಲ್-ಅಲ್-ಮುಖಯ್ಯರ್’ (تل المقير) ಎಂದು ಮರುಹೆಸರಿಸಲಾಗಿದೆ. ಬೈಬಲಿನ ಆದಿಕಾಂಡದಲ್ಲಿ ಈ ನಗರದ ಹೆಸರು ‘Ur of Chaldees’ ಎಂದಿದೆ. ಈ ನಗರ ಇಷ್ಟು ವರ್ಷಗಳ ನಂತರವೂ ಇತಿಹಾಸದ ಪುಟಗಳಲ್ಲಿ ಅಮರವಾಗಿರುವುದಕ್ಕೆ ಒಂದು ಕಾರಣವಿದೆ. ಅದೇನೆಂದರೆ, ಆ ಕಾಲದಲ್ಲಿ ಈ ಉರ್ ನಗರದ ಒಬ್ಬ ಪುರೋಹಿತರ ಮನೆಯಲ್ಲಿ ಇಬ್ರಾಹೀಮ್ ಎಂಬ ಒಬ್ಬ ವಿಶೇಷ ಬಾಲಕನ ಜನನವಾಗುತ್ತದೆ. ಇಷ್ಟಕ್ಕೂ ಆ ಬಾಲಕನಿಗಿದ್ದ ವಿಶೇಷತೆ ಏನೆಂದರೆ ಮುಂದೊಂದು ದಿನ ಸರ್ವಲೋಕಗಳ ಸೃಷ್ಟಿಕರ್ತನು ಈ ಬಾಲಕನನ್ನು ತನ್ನ ಆಪ್ತಮಿತ್ರನಾಗಿ ಸ್ವೀಕರಿಸಿ ಅವರಿಗೆ ಖಲೀಲುಲ್ಲಾಹ್ (ಅಲ್ಲಾಹನಮಿತ್ರ) ಎಂಬ ಬಿರುದು ನೀಡಿ ಸನ್ಮಾನಿಸಿರುವನು.

ಇಬ್ರಾಹೀಮ್(ಅ)ರ ಜನನ ಕಾಲದ ಕುರಿತು ಯಾವುದೇ ಧರ್ಮಗ್ರಂಥಗಳಲ್ಲಿ ನಿಖರವಾದ ಮಾಹಿತಿ ಲಭ್ಯವಾಗುವುದಿಲ್ಲ. ಕೆಲವೊಂದು ಪ್ರಾಚೀನ ಇತಿಹಾಸಕಾರರು ಅವರನ್ನು ಹಮ್ಮುರಾಬಿ ಎಂಬ ಪ್ರಸಿದ್ಧ ರಾಜನ ಸಮಕಾಲೀನರೆಂದು ಹೇಳುತ್ತಾರೆ. ಆದರೆ ಹಮ್ಮುರಾಬಿ ತನ್ನ ನ್ಯಾಯ ಪರತೆಗೆ ಬಹಳ ಹೆಸರುವಾಸಿಯಾಗಿದ್ದ. ಇಬ್ರಾಹೀಮ್(ಅ)ರ ಕಾಲದಲ್ಲಿ ಬಹಳಷ್ಟು ಅನ್ಯಾಯ, ಅತ್ಯಾಚಾರಗಳು ನಡೆದಿದೆ ಎಂಬುದು ಒಂದು ಐತಿಹಾಸಿಕ ಸತ್ಯ. ಹಾಗಾಗಿ ಅವರಿಬ್ಬರೂ ಒಂದೇ ಕಾಲದಲ್ಲಿ ಜೀವಿಸಿರಲು ಸಾಧ್ಯವಿಲ್ಲ ಎಂಬುದನ್ನು ನಂತರದ ಇತಿಹಾಸಕಾರರು ದೃಢಪಡಿಸಿದರು. ಇತ್ತೀಚೆಗೆ, ಅಂದರೆ 1923ರಲ್ಲಿ ಸರ್ ಲಿಯೊನಾರ್ಡ್ ವುಲೀ ಎಂಬ ಪ್ರಸಿದ್ಧ ಪುರಾತತ್ವ ಶಾಸ್ತ್ರಜ್ಞರ ನೇತೃತ್ವದಲ್ಲಿ

'ಬ್ರಿಟಿಷ್ ಮ್ಯೂಸಿಯಂ' ಇದರ ವತಿಯಿಂದ 'ತಲ್–ಅಲ್–ಮುಖಯ್ಯರ್'ನ ಪ್ರದೇಶವನ್ನು ಅಗೆದು ಸಂಶೋಧನೆ ನಡೆಸಿದಾಗ 'ಉರ್' ನಗರಕ್ಕೆ ಸಂಬಂದಿಸಿದ ಮಹತ್ವದ ಮಾಹಿತಿಗಳು ಲಭ್ಯವಾದವು. ಅಲ್ಲಿ ಸಿಕ್ಕಿದ ಪಳೆಯುಳಿಕೆಗಳ ಆಧಾರದಲ್ಲಿ ಅವರು 'ಉರ್'ನ ಸಂಕ್ಷಿಪ್ತ ಇತಿಹಾಸ ಬರೆದಾಗ ಇಬ್ರಾಹೀಮ್(ಅ)ರು ಸುಮಾರು ಕ್ರಿಸ್ತಪೂರ್ವ 2100ರ ವೇಳೆಯಲ್ಲಿ ಜನಿಸಿದರು ಎಂದು ಬರೆದಿದ್ದಾರೆ. ಅನೇಕ ಇತಿಹಾಸಕಾರರು ಈ ಮಾಹಿತಿಯನ್ನು ದೃಢೀಕರಿಸಿದ್ದಾರೆ.–( Abraham - Recent Disscory and Hebrew Origin - Sir Leonard Wolley)

ಪುರೋಹಿತರಾಗಿದ್ದ ಇಬ್ರಾಹೀಮ್(ಅ)ರ ತಂದೆ ತಮ್ಮ ದೇವಾಲಯದ ಪೌರೋಹಿತ್ಯ ಮಾಡುತ್ತಿದ್ದುದು ಮಾತ್ರವಲ್ಲ ಅವರು ಆ ನಗರದ ಪ್ರಸಿದ್ಧ ಶಿಲ್ಪಿಯೂ ಆಗಿದ್ದರು. ಮೂರ್ತಿಕೆತ್ತನೆ ಅವರ ಪೂರ್ವಜರ ಪಾರಂಪರಿಕ ಕಸುಬಾಗಿತ್ತು. ಅವರ ಹೆಸರು ಆಝುರ್(ಬೈಬಲಿನಲ್ಲಿ ತೇರಹ್) ಎಂದಾಗಿತ್ತು. ಅವರು ನಗರದ ಎಲ್ಲಾ ಮಂದಿರಗಳಿಗೂ ಮನೆಗಳಿಗೂ ಅವರವರ ಆರಾಧ್ಯ ಮೂರ್ತಿಗಳನ್ನು ಸುಂದರವಾಗಿ ಕೆತ್ತಿ ಸರಬರಾಜು ಮಾಡುತ್ತಿರುವ ವ್ಯಕ್ತಿಯಾಗಿದ್ದರು.

ಇಂತಹ ಬಹುದೇವಾರಾಧಕರ ನೇತಾರರ ಮನೆಯಲ್ಲಿ ಇಬ್ರಾಹೀಮ್(ಅ)ರು ಜನ್ಮತಾಳಿದ್ದರು. ಇಬ್ರಾಹೀಮ್(ಅ)ರ ವಂಶಾವಳಿಯ ಕುರಿತು ಅನೇಕ ಭಿನ್ನ ನಿಲುವುಗಳಿವೆ. ಅತಿ ಹೆಚ್ಚು ಅಧಿಕೃತವಾದ ನಿಲುವು ಕೆಲವು ಸೀರತ್ ಗ್ರಂಥಗಳಲ್ಲಿ ಉಲ್ಲೇಖವಾಗಿವೆ. ಅದೇ ನಿಲುವಿನ ಪ್ರಸ್ತಾಪವನ್ನು ಬೈಬಲ್‌ನಲ್ಲೂ ಕಾಣಬಹುದು. ಅದು ಈ ರೀತಿ ಇದೆ.

"ಅಬ್ರಾಮ್ (ಇಬ್ರಾಹೀಮ್ ) ಬಿನ್ ತೇರಹ್ (ಆಝುರ್) ಬಿನ್ ನಹೂರ್ ಬಿನ್ ಸರೂ ಬಿನ್ ರವೂ ಬಿನ್‌ಫಾಲಿಖ್ ಬಿನ್ ಅಬಿರ್ ಬಿನ್ ಶಾಲಿಖ್ ಬಿನ್ ಅರ್ಫಕ್ಷದ್ ಬಿನ್ ಸೆಮ್ ಬಿನ್ ನೂಹ್(ಅ) ಬಿನ್ ಲಮಿಕ್ ಬಿನ್ ಮುತ್ವಷ್ಲಕ್ ಬಿನ್ ಅಖ್ನುಕ್ (ಇದ್ರೀಸ್ ) ಬಿನ್ ಯಾರಿದ್ ಬಿನ್ ಮಹಲಯಿಲ್ ಬಿನ್ ಖೈನಾನ್ ಬಿನ್ ಅನೂಶಾ ಬಿನ್ ಶೀತ್ ಬಿನ್ ಆದಮ್(ಅ)".

(ಇಬ್ನ್ ಹಿಶಾಮ್–ಭಾಗ –'ಅಲ್‌ರಹೀಕ್ ಅಲ್' ಮುಖ್ತೂಮ್ –ಪುಟ: 32)

ಬಾಲಕ ಇಬ್ರಾಹೀಮ್(ಅ) ಬಾಲ್ಯದಲ್ಲೇ ಬಹಳ ಜಾಣ. ತನ್ನ ತಂದೆಯ ಮೂರ್ತಿ ಕೆತ್ತನೆಯ ಕೆಲಸವನ್ನು ತದೇಕಚಿತ್ತದಿಂದ ನೋಡುತ್ತಿದ್ದರು. ಜನರು ಬಂದು ಬಹಳ ಭಯಭಕ್ತಿಯಿಂದ ಅವುಗಳನ್ನು ಕೊಂಡು ಹೋಗುತ್ತಿರುವುದನ್ನು ಗಮನಿಸುತ್ತಿದ್ದರು. ಅವುಗಳಲ್ಲಿ ಸ್ತ್ರೀ ಮತ್ತು ಪುರುಷ ಮೂರ್ತಿಗಳಿರುವುದು ನೋಡಿ ಅವರಿಗೆ ವಿಸ್ಮಯವಾಗುತ್ತಿತ್ತು. ಅವುಗಳ ವ್ಯತ್ಯಸ್ತ ಗಾತ್ರಗಳು ಮತ್ತು ವಿವಿಧ ಆಕಾರಗಳು ಅವರಲ್ಲಿ ಅಚ್ಚರಿ ಮೂಡಿಸುತ್ತಿತ್ತು. ಅವುಗಳ ಮಧ್ಯೆ

ದೈವಿಕ ಗುಣಗಳನ್ನು ವಿಂಗಡಿಸಲಾಗಿರುವುದು ನೋಡಿ ಅವರು ನಿಬ್ಬೆರಗಾಗುತ್ತಿದ್ದರು. ಶಕ್ತಿಯನ್ನು ದಯಪಾಲಿಸುವವರು, ಪ್ರೇಮಕ್ಕೊಬ್ಬರು, ಕಾಮಕ್ಕೊಬ್ಬರು, ಮಳೆ ಸುರಿಸುವವರು, ಕಾಡುಗಳ ಮಾಲಕರು, ಗಾಳಿ ಬೀಸುವವರು... ಹೀಗೆ ಪ್ರತಿಯೊಂದಕ್ಕೂ ಒಂದು ಮೂರ್ತಿಯು ನಿಯುಕ್ತವಾಗಿತ್ತು. ನಿಷ್ಕಳಂಕ ಪ್ರಕೃತಿಯ ಬಾಲಕ ಇಬ್ರಾಹೀಮರಿಗೆ ಇವೆಲ್ಲವೂ ಸೋಜಿಗದ ಸಂಗತಿಗಳು. ಬಹಳ ಬುದ್ಧಿವಂತರಾಗಿದ್ದ ಅವರು ಇವುಗಳ ಕುರಿತು ಚಿಂತನೆಯಲ್ಲಿ ಮಗ್ನರಾಗುತ್ತಿದ್ದರು. ಆ ಮೂರ್ತಿಗಳು ಮಾತನಾಡುವುದಿಲ್ಲ. ಹೇಳಿದ್ದನ್ನು ಕೇಳಿಸಿಕೊಳ್ಳುವುದಿಲ್ಲ. ಜನರು ಬಂದು ಅರ್ಪಿಸುವ ತಿಂಡಿ–ತಿನಸುಗಳನ್ನೂ, ಫಲ–ಪುಷ್ಪಗಳನ್ನೂ ಮುಟ್ಟಿ ನೋಡುವುದಿಲ್ಲ, ಇಲಿಗಳು ಅವುಗಳ ಮೈಮೇಲೆಲ್ಲಾ ಹರಿದಾಡಿದರೂ ಅವುಗಳಿಗೆ ಪರಿವೆ ಇಲ್ಲ. ಆಗಾಗ ಅವರಿಗೆ ಸ್ನಾನ ಮಾಡಿಸಬೇಕಾಗುತ್ತದೆ. ತಮ್ಮ ಕೆಲಸಗಳನ್ನೇ ಮಾಡಲು ಸಾಧ್ಯವಿಲ್ಲದ ಇವುಗಳು ಇತರರ ಸಂಕಷ್ಟ ನಿವಾರಣೆ ಮಾಡುವವರಾಗುವುದು ಹೇಗೆ? ಹಾಗಿರುವಾಗ ಇವುಗಳ ಆರಾಧನೆ ಏಕೆ? ಎಂಬಂತಹ ಮುಗ್ಧ ಪ್ರಶ್ನೆಗಳು ಆ ಪುಟ್ಟ ಬಾಲಕನ ಮನದಲ್ಲಿ ಸುಳಿದಾಡಿ ಕೋಲಾಹಲ ಉಂಟು ಮಾಡುತ್ತಿತ್ತು.

ಇವುಗಳ ಕುರಿತು ಅವರು ತನ್ನ ತಂದೆ ತಾಯಿಯನ್ನು ಪ್ರಶ್ನಿಸುತ್ತಿದ್ದರು ಎಂದು ಕೆಲವು ಇತಿಹಾಸ ಗ್ರಂಥಗಳಲ್ಲಿ ಲಿಖಿತವಾಗಿವೆ. ಸಅಲಬಿಯವರು ತಮ್ಮ 'ಕಸಸುಲ್ ಅಂಬಿಯಾ' ಎಂಬ ಗ್ರಂಥದಲ್ಲಿ ಬಾಲಕ ಇಬ್ರಾಹೀಮ್(ಅ) ತಮ್ಮ ತಾಯಿಯೊಡನೆ ಈ ಕುರಿತು ಮಾಡಿದ ಸಂಭಾಷಣೆಯನ್ನು ನಿರೂಪಿಸಿದ್ದಾರೆ.

ಬಾಲಕ: ಅಮ್ಮ, ನನ್ನ ಪ್ರಭು (ನನ್ನನ್ನು ಪೋಷಿಸುವವರು) ಯಾರಮ್ಮ?

ತಾಯಿ: ನಿನ್ನನ್ನು ಪೋಷಿಸುವವಳು ನಾನೇ ಅಲ್ಲವೇ ಮಗು!

ಬಾಲಕ: ಹಾಗಾದರೆ ನಿನ್ನ ಪ್ರಭು ಯಾರಮ್ಮ?

ತಾಯಿ: ಅದು ನಿನ್ನ ತಂದೆ.

ಬಾಲಕ: ಓಹೋ, ಅಪ್ಪನ ಪ್ರಭು ಯಾರು?

ತಾಯಿ: ನಮ್ರೂದ್!

ಬಾಲಕ: ನಮ್ರೂದ್ ನ ಪ್ರಭು ಯಾರು?

ತಾಯಿಗೆ ಪುಟ್ಟ ಬಾಲಕನ ಅಧಿಕಪ್ರಸಂಗ ನೋಡಿ ಕೋಪ ನೆತ್ತಿಗೇರಿತು, ಅವನನ್ನು ಗದರಿಸಿ ಸುಮ್ಮನಾಗಿಸಿ ತಂದೆಗೆ ದೂರು ನೀಡಿದರು. ತಂದೆ ಮಗನನ್ನು ಸರಿಯಾಗಿ ಥಳಿಸಿ ಇನ್ನು ಮುಂದೆ ಇಂತಹ ಮೂರ್ಖ ಪ್ರಶ್ನೆಗಳನ್ನು ಕೇಳಬಾರದೆಂದು ತಾಕೀತು ಮಾಡಿದರು.

ಬರ್ನಾಬಾಸ್ ಬೈಬಲಿನಲ್ಲಿ ಬಾಲಕ ಇಬ್ರಾಹೀಮ್(ಅ) ಏಳು ವರ್ಷ ವಯಸ್ಸಿನಲ್ಲಿ ತನ್ನ ತಂದೆಯೊಡನೆ ಸೃಷ್ಟಿಕರ್ತನ ಕುರಿತ ತನ್ನ ಕುತೂಹಲವನ್ನು ವ್ಯಕ್ತಪಡಿಸಿದ ರೀತಿಯನ್ನು ಚಿತ್ರಿಸಲಾಗಿದೆ.

ಬಾಲಕ: ಮನುಷ್ಯನ ಸೃಷ್ಟಿಕರ್ತ ಯಾರಪ್ಪ?

ತಂದೆ: ಮನುಷ್ಯನೇ ಮನುಷ್ಯನನ್ನು ಸೃಷ್ಟಿಸಿರುವುದು. ನಿನ್ನನ್ನು ಸೃಷ್ಟಿಸಿರುವುದು ನಾನು. ನನ್ನನ್ನು ಸೃಷ್ಟಿಸಿರುವುದು ನನ್ನ ತಂದೆ.

ಬಾಲಕ: ಅಪ್ಪಾ ಹೀಗಾಗಲು ಸಾಧ್ಯವೇ ಇಲ್ಲ. ನಾನು ಮುದುಕರೊರ್ವರನ್ನು ಕಂಡೆ 'ದೇವನು ನನಗ್ಯಾಕೆ ಮಕ್ಕಳು ನೀಡಲಿಲ್ಲ... ಎಂದು ಹೇಳುತ್ತಾ ಅಳುತ್ತಿದ್ದರು,

ತಂದೆ: ಹೌದು ಮಗು ಮನುಷ್ಯರು ಮನುಷ್ಯರನ್ನು ಸೃಷ್ಟಿಸುವಾಗ ದೇವರ ಸಹಾಯ ಖಂಡಿತಾ ಇರುತ್ತದೆ. ದೇವರೊಡನೆ ಬೇಡುವಾಗಲೆಲ್ಲ ಅವರಿಗೆ ಕಪ್ಪ ಕಾಣಿಕೆಗಳನ್ನು ಅರ್ಪಿಸುತ್ತಾ ಇರಬೇಕು. ಆಗ ಪ್ರಾರ್ಥನೆಗಳು ಸ್ವೀಕಾರವಾಗುತ್ತವೆ.

ಬಾಲಕ : ದೇವರ ಸಂಖ್ಯೆ ಎಷ್ಟು?

ತಂದೆ : ಅಸಂಖ್ಯಾತ

ಬಾಲಕ: ಹಾಗಾದರೆ ಒಬ್ಬ ದೇವರ ಸೇವೆ ಮಾಡಿ ಇನ್ನೊಬ್ಬರ ಸೇವೆ ಮಾಡದಿದ್ದರೆ ಅವರು ನನಗೆ ಕೇಡುಂಟು ಮಾಡುವರೇ? ಆಗ ನಾನು ಸೇವೆಗೈದ ದೇವರು ನನ್ನ ರಕ್ಷಣೆಗೆ ಬರುವರೇ? ಅವರ ಮಧ್ಯೆ ಜಗಳವಾಗಿ ನನ್ನ ದೇವರು ಕೊಲ್ಲಲ್ಪಟ್ಟರೆ ನಾನು ಜೀವಂತ ಉಳಿಯುವೆನೇ ಅಪ್ಪಾ?

ತಂದೆ: ಹಾಗಾಗುವುದಿಲ್ಲ ಮಗನೇ. ನಮ್ಮ ದೊಡ್ಡ ದೇವಳದಲ್ಲಿ ಒಬ್ಬ ದೊಡ್ಡ ದೇವ ಮತ್ತು ಅನೇಕ ಚಿಕ್ಕ ದೇವರುಗಳಿವೆ. ಅದೆಷ್ಟೋ ವರ್ಷಗಳಿಂದ ನಾನು ಅವುಗಳನ್ನು ನೋಡುತ್ತಿದ್ದೇನೆ. ಅವರು ಒಮ್ಮೆಯೂ ಜಗಳವಾಡಿಲ್ಲ.

ಬಾಲಕ: ಅಪ್ಪಾ ದೇವರು ಹೇಗಿರುತ್ತಾರೆ?

ತಂದೆ: ಮೂರ್ಖ. ನಾನು ಪ್ರತಿದಿನ ಒಂದೊಂದು ದೇವರನ್ನು ಕೆತ್ತಿ ಮಾರುವುದನ್ನು ನೀನು ನೋಡಲಿಲ್ಲವೇ? ಅವುಗಳು ಒಂದೇ ರೀತಿ ಇರುವುದಿಲ್ಲ. ಇದೋ ನೋಡು ನನ್ನ ಶಿಲ್ಪಾಕೃತಿಯ ಚಾತುರ್ಯ! ಇದು ಜೀವಂತವಾಗಿರುವಂತೆ ತೋರುವುದಿಲ್ಲವೇ? ಇದರಲ್ಲಿ ಉಸಿರು ಮಾತ್ರ ಇಲ್ಲ ಅಷ್ಟೇ!

ಬಾಲಕ: ಓಹೋ ಹಾಗಾ? ಇದರಲ್ಲಿ ಉಸಿರಿಲ್ಲದಿದ್ದರೆ ನಮಗಿದು ಉಸಿರು ನೀಡುವುದು ಹೇಗೆ? ಇದು ನಿರ್ಜೀವಿಯಾಗಿರುವಾಗ ನಮಗೆ ಜೀವನ ನೀಡುವುದು ಹೇಗೆ?

ತಂದೆ: (ಕೋಪದಿಂದ) ನಿನಗೀಗ ಬುದ್ಧಿ ಇಲ್ಲ ನೀನು ಸುಮ್ಮನಿರು.

ಬಾಲಕ: ದೇವರನ್ನು ನಾವೇ ಮಾಡುವುದಾದರೆ ನಮ್ಮನ್ನು ಸೃಷ್ಟಿಸುವುದರಲ್ಲಿ ದೇವನ ಪಾತ್ರ ಇರಲು ಸಾಧ್ಯವಿಲ್ಲ. ಅಪ್ಪಾ...! ನೀನು ಇಷ್ಟೊಂದು ದೇವರುಗಳನ್ನು ಮಾಡುತ್ತಿರುವಾಗ ಆ ದೇವರುಗಳು ನಿನಗೆ ಬಹಳಷ್ಟು ಮಕ್ಕಳನ್ನು ಸೃಷ್ಟಿಸುವಲ್ಲಿ ಸದಾ ಸಹಾಯ ಮಾಡಬೇಕಿತ್ತು. ಹಾಗೆ ಮಾಡಿದ್ದರೆ ನೀನು ಅತಿ ಹೆಚ್ಚು ಶಕ್ತಿಶಾಲಿಯಾಗುತ್ತಿದ್ದೆ!

'ತಂದೆಯ ಬಾಯಿಂದ ಮಾತೇ ಹೊರಡಲಿಲ್ಲ.'

(ಬಾರ್ನಾಬಾಸ್ ಬೈಬಲ್–26:54–56)

ಪವಿತ್ರ ಕುರ್‌ಆನಿನಲ್ಲಿ ಇಂತಹ ಒಂದು ಘಟನೆಯ ಉಲ್ಲೇಖವಿಲ್ಲದಿದ್ದರೂ ಇಬ್ರಾಹೀಮ್(ಅ) ತಮ್ಮ ತಂದೆಯೊಡನೆ ಮೂರ್ತಿ ಪೂಜೆಯ ಕುರಿತು ಆಕ್ಷೇಪಿಸುವ ಉಲ್ಲೇಖಗಳಿವೆ. ಒಟ್ಟಿನಲ್ಲಿ ಅಂದಿನ ಸಮಾಜದಲ್ಲಿದ್ದ ದೇವತ್ವದ ಕಲ್ಪನೆಯು ಇಬ್ರಾಹೀಮ್(ಅ)ರನ್ನು ಚಿಂತಿಸುವಂತೆ ಮಾಡಿತ್ತು. ಅದರಿಂದಾಗಿ ಅವರು ಸತ್ಯಾನ್ವೇಷಣೆಯ ಹಾದಿಯನ್ನು ನೆಚ್ಚಿಕೊಂಡರು.

❑

# ಅಂದಿನ 'ಉರ್' ನಗರದ ಸಾಮಾಜಿಕ ಪರಿಸ್ಥಿತಿ

ನವಶಿಲಾಯುಗದ ಪ್ರಾರಂಭದಲ್ಲಿ ಕೇವಲ ಬೇಟೆಯಾಡಿ ಜೀವಿಸುವ ಮಾನವ ಸಂಸ್ಕೃತಿ ಕಳೆಗುಂದುತ್ತಾ ಬಂದಿತ್ತು. ಜಾನುವಾರು ಸಾಕಣೆ, ಕೃಷಿ ಮತ್ತು ವ್ಯವಸಾಯದ ಪರಂಪರೆಯು ಚಿಗುರೊಡೆದಿತ್ತು. ಕ್ರಿಪೂ 5000ದ ವೇಳೆಗೆ ನಾಗರಿಕತೆಗಳ ಉಗಮವಾಗತೊಡಗಿತ್ತು. ಅವುಗಳ ಪೈಕಿ ಬ್ಯಾಬಿಲೋನಿಯಾದ ನಾಗರಿಕತೆ ಬಹಳ ಮುಖ್ಯವಾದುದು. ಯೂಫ್ರಟಿಸ್ ಮತ್ತು ಟೈಗ್ರಿಸ್ ನದಿ ತೀರದಲ್ಲಿ ಉಗಮವಾದ ನಾಗರಿಕತೆಯದು. ಅದು ಮೆಸೆಪೊಟೇಮಿಯಾದ (ಇಂದಿನ ಇರಾಕ್) ಎಲ್ಲೆಡೆಯೂ ಹಬ್ಬಿತ್ತು. ಅರೇಬಿಯಾ ಪರ್ಯಾಯ ದ್ವೀಪವು ಮೆಸೆಪೊಟೇಮಿಯಾದ ಹತ್ತಿರದಲ್ಲೇ ನೆಲೆಸಿದ್ದರೂ ಅದರ ಒಳಭಾಗದಲ್ಲಿದ್ದ ವಿಶಾಲವಾದ ಮರುಭೂಮಿಗಳಿಂದಾಗಿ ಅದು ನಾಗರೀಕತೆಯ ಆವರ್ತದೊಳಗೆ ಸೇರಲಿಲ್ಲ. ಆದರೆ ಕ್ರಮೇಣ ಆ ಫಲವತ್ತಾದ ಪ್ರದೇಶದೆಡೆಗೆ ಜನರ ವಲಸೆಯಾಗತೊಡಗಿತು. ಮೂಲತಃ ಅರೇಬಿಯಾದವರಾದ ಸುಮೇರಿಯನ್ನರು ಯಾವುದೋ ನೈಸರ್ಗಿಕ ವಿಪತ್ತಿನಿಂದಾಗಿ ತಮ್ಮ ದೇಶದಿಂದ ಮೆಸೆಪೊಟೇಮಿಯಾದೆಡೆಗೆ ತಂಡೋಪ ತಂಡವಾಗಿ ವಲಸೆ ಹೋಗಿ ಅಲ್ಲೇ ನೆಲೆಸಿದರು. ಕ್ರಿಪೂ 4000ದ ವೇಳೆಗೆ ಆ ಸಮುದಾಯವು ಅಲ್ಲಿನ ಆಡಳಿತದ ಚುಕ್ಕಾಣಿಯನ್ನು ಕೈಗೆತ್ತಿಕೊಂಡಿತು. ಸುಮೇರಿಯನ್ನರು ಸುಮಾರು ಎರಡು ಸಾವಿರ ವರ್ಷಗಳು ಆಡಳಿತ ನಡಿಸಿದ ನಂತರ ಕ್ರಿ.ಪೂ 2150ರ ವೇಳೆಗೆ ಬ್ಯಾಬಿಲೋನಿಯನ್ ಆಡಳಿತಗಾರರ ಯುಗ ಪ್ರಾರಂಭವಾಯಿತು.

(ಅಲ್ 'ಅರಬ್ಸ್ ಕಬ್ಲ್ ಅಲ್' ಇಸ್ಲಾಮ್ – ಜುರ್ಜೀ ಝುಯ್ದಾನ್)

ಸುಮೇರಿಯನ್ ಆಡಳಿತದ ಅಂತ್ಯ ಅಥವಾ ಬ್ಯಾಬಿಲೋನಿಯನ್ ಆಡಳಿತದ ಆರಂಭ ಕಾಲದಲ್ಲಿ ಪ್ರವಾದಿ ಇಬ್ರಾಹೀಮ್(ಅ) ಮೆಸೆಪೊಟೇಮಿಯಾ ದೇಶದ, ಬ್ಯಾಬಿಲೋನಿಯ ನಗರದ ಸಮೀಪದ ನಗರವಾದ 'ಉರ್' ನಲ್ಲಿ ಜೀವಿಸಿದ್ದರು ಎಂಬುದು ಇತಿಹಾಸಕಾರರ ಅಭಿಪ್ರಾಯ. ಸುಮೇರಿಯನ್ನರು ತಮ್ಮ

ಆಡಳಿತಕಾಲದಲ್ಲಿ ಅನೇಕ ಅಭಿವೃದ್ಧಿ ಕಾರ್ಯಗಳನ್ನು ಮಾಡಿದ್ದರು. ಅದರಿಂದಾಗಿ ಮಾನವನ ಬುದ್ಧಿಶಕ್ತಿಯ ಬೆಳವಣಿಗೆ ಮತ್ತು ಆದರಿಂದಾಗುವ ಸಾಧನೆಗಳು ಮುಂದುವರಿಯುತ್ತಾ ಹೋಯಿತು. ಬ್ಯಾಬಿಲೋನಿಯಾದ ಜನರು ವಾಸ್ತುಶಿಲ್ಪದಲ್ಲಿ ಪ್ರಾವೀಣ್ಯತೆ ಪಡೆದಿದ್ದರು. ಅವರು ಬೃಹತ್ ಬಂಗಲೆಗಳನ್ನು ಕಟ್ಟಿದ್ದರು. ಸುಂದರವಾದ ವಾಸ್ತುಶಿಲ್ಪದ ದೇಗುಲಗಳನ್ನು ನಿರ್ಮಿಸಿದ್ದರು. ನೆರೆ ರಾಷ್ಟ್ರಗಳೊಂದಿಗೆ ವ್ಯಾಪಾರ ಮಾಡುತ್ತಿದ್ದರು. ವ್ಯಾಪಾರ ಸರಂಜಾಮುಗಳ ಸಾಗಾಣಿಕೆಗಾಗಿ ಹಡಗುಗಳ ನಿರ್ಮಾಣದ ಕಲೆಯನ್ನೂ ಕಲಿತಿದ್ದರು. ಸಮುದ್ರ ಪ್ರಯಾಣದ ವೇಳೆ ಧ್ರುವ ತಾರೆಗಳ ಮೂಲಕ ಮಾರ್ಗದರ್ಶನ ಪಡೆಯುವ ಜ್ಞಾನವೂ ಅವರಿಗಿತ್ತು. ಖಗೋಳಶಾಸ್ತ್ರದ ಪರಿಚಯ ಕೂಡಾ ಅವರಿಗಿತ್ತು. ಚಂದ್ರಗ್ರಹಣದ ಸಮಯವನ್ನು ಸರಿಯಾಗಿ ಅಂದಾಜಿಸುತ್ತಿದ್ದರು. ಇದಲ್ಲದೆ ಸಂಗೀತ, ಚಿತ್ರಕಲೆ, ಶಿಲ್ಪಕಲೆ ಇತ್ಯಾದಿ ಕಲೆಗಳನ್ನು ಈಜಿಪ್ಟಿನ ನಾಗರಿಕತೆಯಿಂದ ಕಲಿತು ಪ್ರಾವೀಣ್ಯತೆ ಪಡೆದಿದ್ದರು. ಜ್ಯೋತಿಷ್ಯ ಶಾಸ್ತ್ರವು ಅವರ ಕಸುಬುಗಳಲ್ಲೊಂದಾಗಿತ್ತು.

ಇಷ್ಟೆಲ್ಲಾ ಕಲೆಗಳನ್ನು ಕರಗತ ಮಾಡಿಕೊಂಡು, ವ್ಯಾಪಾರ ವ್ಯವಸಾಯದಲ್ಲಿ ನೈಪುಣ್ಯತೆಯನ್ನು ಪಡೆದು, ವಿವಿಧ ಶಾಸ್ತ್ರಗಳಲ್ಲಿ ಪ್ರಾವೀಣ್ಯತೆಯನ್ನು ಗಳಿಸಿ, ಬುದ್ಧಿವಂತರು ಮತ್ತು ಜ್ಞಾನಿಗಳು ಎಂದೆನಿಸಿಕೊಂಡು, ಬಹಳ ಸುಖಸಂಪನ್ನ ಜೀವನವನ್ನು ನಡೆಸುತ್ತಿದ್ದ ಈ ಸಮೃದ್ಧ ನಾಗರಿಕತೆಯ ರೂವಾರಿಗಳು ಸೃಷ್ಟಿಕರ್ತನನ್ನು ಗುರುತಿಸುವಲ್ಲಿ ಮಾತ್ರ ಸೋತುಬಿಟ್ಟಿದ್ದರು. ಮೂರ್ತಿ ಪೂಜೆಯಲ್ಲಿ ಮುಳುಗಿ, ಸಾವಿರಾರು ಆರಾಧ್ಯರುಗಳ ಉಪಾಸನೆ ಮಾಡುತ್ತಾ, ಸೂರ್ಯ, ಚಂದ್ರ ನಕ್ಷತ್ರಾದಿಗಳನ್ನು ಕೊಂಡಾಡುತ್ತಾ, ಜ್ಯೋತಿಷ್ಯದ ಗೀಳನ್ನು ಹಚ್ಚಿಕೊಂಡು, ಧಾರ್ಮಿಕ ಅರಾಜಕತೆಯ ಪರಾಕಾಷ್ಠೆಯಲ್ಲಿದ್ದರು. ಬುದ್ಧಿವಂತಿಕೆಗೆ ಹೆಸರುವಾಸಿಯಾದವರು ಸೃಷ್ಟಿಕರ್ತನ ಕುರಿತು ತರ್ಕಬದ್ಧವಾಗಿ ಆಲೋಚಿಸುವ ಗೋಜಿಗೆ ಹೋಗಲಿಲ್ಲ. ಏಕದೇವಾರಾಧನೆಯಿಂದ ದೂರ ಸರಿದು ದೇವಧಿಕ್ಕಾರದೆಡೆಗೆ ಸಾಗಿದ ಅವರ ಪೂರ್ವಜರ ಇತಿಹಾಸವನ್ನು ಅವರು ಸ್ಮರಿಸಲಿಲ್ಲವೋ? ಅಥವಾ ಲೌಕಿಕ ಪ್ರಾಬಲ್ಯತೆಯನ್ನು ಪಡೆದ ಸಮುದಾಯಗಳೆಲ್ಲವೂ ತಮ್ಮ ಹಿರಿಮೆಯನ್ನು ಕಾಪಾಡಲು ಹೀಗೆ ಮಾಡುತ್ತಿದ್ದರೋ? ಒಟ್ಟಿನಲ್ಲಿ ತಮ್ಮ ಸೃಷ್ಟಿಕರ್ತನನ್ನು ಕಡೆಗಣಿಸಿ ತಮಗನಿಸಿದಂತೆ ಧಾರ್ಮಿಕ ಆಚಾರಗಳನ್ನು ರೂಢಿಸಿಕೊಳ್ಳುವ ತೀರ್ಮಾನ ಮಾಡಿದ ಸಮುದಾಯವಾಗಿತ್ತು ಅದು. ಇಂತಹ ಕಾಲಘಟ್ಟದಲ್ಲೇ 'ಉರ್' ಎಂಬ ಆ ಪ್ರದೇಶದಲ್ಲಿ ಪ್ರವಾದಿ ಇಬ್ರಾಹೀಮ್(ಅ) ಜನಿಸಿ, ಬಾಲ್ಯ ಕಳೆದು ಯೌವನಾವಸ್ಥೆಗೆ ತಲುಪಿದರು.

ಬಾಲ್ಯದಲ್ಲೇ ತನ್ನ ಸಮಾಜದಲ್ಲಿದ್ದ ದೇವತ್ವದ ಕಲ್ಪನೆಯನ್ನು ಇಬ್ರಾಹೀಮ್(ಅ)ರ ಮನಸ್ಸು ನಿರಾಕರಿಸುತ್ತಿತ್ತು. ಹಾಗಾಗಿಯೇ ಅವರು ಪದೇಪದೇ ತನ್ನ ಹೆತ್ತವರೊಡನೆ ಆ ಬಗ್ಗೆ ತರ್ಕಿಸುತ್ತಿದ್ದರು. ಯೌವನಾವಸ್ಥೆ ತಲುಪಿದಾಗ ಆ ಬಗ್ಗೆ ಗಹನವಾದ ಚಿಂತನ ಮಂಥನವನ್ನು ನಡೆಸಿದರು. ಬಹುದೇವಾರಾಧನೆ ಒಂದು ಭಯಂಕರ ಪಥಭ್ರಷ್ಟತೆಯಾಗಿದೆ ಎಂದು ಅವರಿಗೆ ಅರಿವಾಯಿತು. ಆ ಅರಿವು ಬಂದೊಡನೆ ಮೊಟ್ಟಮೊದಲು ಅವರು ಏಕದೇವತ್ವವನ್ನು ಬೋಧಿಸಿದ್ದು ತನ್ನ ತಂದೆಗೆ. ಆ ಸಮುದಾಯದವರು ಪ್ರವಾದಿ ಇಬ್ರಾಹೀಮ್(ಅ)ರ ಏಕದೇವತ್ವದ ಕರೆಯನ್ನು ನಿರಾಕರಿಸಿ ತಾವು ಮಾಡುತ್ತಿದ್ದ ಕುಕೃತ್ಯದ ಬಗ್ಗೆ ಹೆಮ್ಮೆಪಡುವ ಅಹಂಕಾರಿಗಳಾಗಿದ್ದರು. ಇಬ್ರಾಹೀಮ್(ಅ)ರ ಕರೆಗೆ ಅವರ ಉತ್ತರ ಹೀಗಿತ್ತು,

قَالُوا نَعْبُدُ أَصْنَامًا فَنَظَلُّ لَهَا عَاكِفِينَ

ಅವರು (ಇಬ್ರಾಹೀಮ್(ಅ)ರ ಸಮುದಾಯ), "ನಾವು ಈ ವಿಗ್ರಹಗಳನ್ನು ಪೂಜಿಸುತ್ತೇವೆ ಮತ್ತು ಇವುಗಳ ಸೇವೆಯಲ್ಲೇ ನಿರತರಾಗಿರುತ್ತೇವೆ" ಎಂದರು

(ಕುರ್‌ಆನ್ – 26:71)



## ಪ್ರವಾದಿತ್ವದ ಪ್ರಾಪ್ತಿ

ಇಬ್ರಾಹೀಮ್(ಅ)ರಿಗೆ ಪ್ರವಾದಿತ್ವ ಲಭಿಸುವುದಕ್ಕಿಂತ ಮೊದಲಿನ ಜೀವನದ ಬಗ್ಗೆ ಮತ್ತು ಅವರಿಗೆ ಪ್ರವಾದಿತ್ವವನ್ನು ನೀಡಿದ ಸಂದರ್ಭದ ಬಗ್ಗೆ ಯಾವುದೇ ಸ್ಪಷ್ಟ ಪ್ರಸ್ತಾಪ ಪವಿತ್ರ ಕುರ್‌ಆನಿನಲ್ಲಿ ಕಾಣಸಿಗದಿದ್ದರೂ ಒಮ್ಮೆ ಅವರ ಸಮುದಾಯದ ಜನರು ಒಂದು ಸಂದರ್ಭದಲ್ಲಿ ಅವರ ಬಗ್ಗೆ ಒಂದು ಮಾತು ಹೇಳಿರುವುದನ್ನು ಕುರ್‌ಆನ್ ಪ್ರಸ್ತಾಪಿಸುತ್ತದೆ,

قَالُوا سَمِعْنَا فَتًى يَذْكُرُهُمْ يُقَالُ لَهُ إِبْرَاهِيمُ

ಕೆಲವರು ಹೀಗೆ ಹೇಳಿದರು; "ಓರ್ವ ತರುಣನು ಅವುಗಳ ಬಗ್ಗೆ ಪ್ರಸ್ತಾಪಿಸುತ್ತಿದ್ದುದನ್ನು ನಾವು ಕೇಳಿದ್ದೆವು. ಅವನ ಹೆಸರು ಇಬ್ರಾಹೀಮ್(ಅ) ಎಂದಾಗಿದೆ."

(ಕುರ್‌ಆನ್ – 21:60)

ಇದು ಪ್ರವಾದಿತ್ವ ಲಭಿಸಿದ ನಂತರದ ಘಟನೆ. ಇಲ್ಲಿ ತರುಣ ಎಂಬುದಕ್ಕೆ ಕುರ್‌ಆನ್ 'ಫತನ್' ಎಂಬ ಪದವನ್ನು ಬಳಸಿದೆ. ಅರಬಿ ಭಾಷೆಯಲ್ಲಿ 'ಫತನ್' ಅಂದರೆ ತನ್ನ ಬಾಲ್ಯಾವಸ್ಥೆಯಿಂದ ಈಗಷ್ಟೇ ಯವ್ವನಾವಸ್ಥೆಗೆ ತಲುಪಿ, ಸುಜ್ಞಾನ ಮತ್ತು ಅರಿವಿನ ಪಕ್ವತೆ ಪ್ರಾಪ್ತವಾಗಿರುವ ಯುವಕ. ಹಾಗಾಗಿ ಇದರಿಂದ ಇಬ್ರಾಹೀಮ್(ಅ)ರಿಗೆ ಯೌವನದ ಆರಂಭ ಘಟ್ಟದಲ್ಲೇ ಪ್ರವಾದಿತ್ವ ಲಭಿಸಿತ್ತು ಎಂದು ನಿರ್ಣಯಿಸಬಹುದು. ಅವರು ತನಗೆ ಪ್ರವಾದಿತ್ವ ಲಭಿಸಿರುವುದರ ಕುರಿತು ತನ್ನ ತಂದೆಯೊಡನೆ ಹೇಳಿರುವುದಾಗಿ ಕುರ್‌ಆನ್ ಪ್ರಸ್ತಾಪಿಸುತ್ತದೆ.

يَا أَبَتِ إِنِّي قَدْ جَاءَنِي مِنَ الْعِلْمِ مَا لَمْ يَأْتِكَ فَاتَّبِعْنِي أَهْدِكَ صِرَاطًا سَوِيًّا

ಅಪ್ಪಾ, ತಮಗೆ ಬಂದಿರದ ಜ್ಞಾನವೊಂದು ನನಗೆ ಬಂದಿದೆ. ತಾವು ನನ್ನನ್ನು ಅನುಸರಿಸಿರಿ. ನಾನು ತಮಗೆ ನೇರ ಮಾರ್ಗವನ್ನು ತೋರಿಸುವೆನು.

(ಕುರ್‌ಆನ್–19:43)

ಹೀಗೆ ಪ್ರವಾದಿ ಇಬ್ರಾಹೀಮರು(ಅ) ತಮ್ಮ ಜೀವನದ ನೈಜ ಉದ್ದೇಶವನ್ನು ಕಂಡುಕೊಂಡರು. ಪ್ರವಾದಿತ್ವದ ಬೇಡಿಕೆಯನ್ನು ಪೂರೈಸಲು ಅಲ್ಲಾಹನು ಅವರನ್ನು ಕಳುಹಿಸಿದ ನಾಡಾದರೂ ಎಂತಹದ್ದು! ಬಹುದೇವಾರಾಧನೆಯ ಬಹುದೊಡ್ಡ ಕೇಂದ್ರದೊಳಗೆ ಏಕದೇವಾರಾಧನೆಯ ಕಹಳೆ ಊದುವ ಅತಿ ಕ್ಲಿಷ್ಟಕರವಾದ, ಹೆಜ್ಜೆಹೆಜ್ಜೆಗೂ ಕಷ್ಟಕಾರ್ಪಣ್ಯಗಳನ್ನು ಎದುರಿಸಬೇಕಾದ ಬಹಳ ಅಪಾಯಕಾರಿ ಕೆಲಸಕ್ಕೆ ಜಗತ್ತಿನ ಸೃಷ್ಟಿಕರ್ತನು ತನ್ನ ಇಷ್ಟದಾಸನನ್ನು ನಿಯೋಗಿಸಿದ್ದನು.

ತನ್ನ ಸಂದೇಶವಾಹಕರನ್ನು ಅತಿ ಕಷ್ಟಕರವಾದ ಅಭಿಯಾನಕ್ಕೆ ಕಳುಹಿಸುವಾಗ ಅವರಿಗೆ 'ಇಲ್ಮುಲ್ ಯಕೀನ್' (ಖಚಿತಜ್ಞಾನ) ದಯಪಾಲಿಸುವುದು ಅಲ್ಲಾಹನ ಸುನ್ನತ್(ಕಾರ್ಯವಿಧಾನ) ಆಗಿದೆ. ಅದರ ಆಧಾರದಲ್ಲೇ ಆತನು ಮೂಸಾ(ಅ)ರನ್ನು ದುಷ್ಕರ್ಮಿಯಾದ ಫಿರ್‌ಔನನ ಬಳಿ ಕಳುಹಿಸುವಾಗ ತನ್ನೊಂದಿಗೆ ನೇರವಾಗಿ ಮಾತನಾಡುವ ಗೌರವವನ್ನು ಅವರಿಗೆ ದಯಪಾಲಿಸಿದ್ದನು. ಅದೇ ಕಾರ್ಯವಿಧಾನದ ಆಧಾರದಲ್ಲಿ ಆತನು ಪ್ರವಾದಿ ಮುಹಮ್ಮದ್(ಸ)ರನ್ನು ಮದೀನಾಕ್ಕೆ ವಲಸೆ ಹೋಗಿ ಅಲ್ಲೊಂದು ಇಸ್ಲಾಮೀ ಆಡಳಿತದ ಬುನಾದಿ ಹಾಕಲು ತಯಾರು ಮಾಡುವುದಕ್ಕಿಂತ ಮುಂಚೆ ಅವರಿಗೆ ಮಿಅ್‌ರಾಜ್‌ನ ಅತ್ಯಮೂಲ್ಯ ಕೊಡುಗೆ ನೀಡಿದ್ದನು. ದೊಡ್ಡ ದೌತ್ಯವನ್ನು ಪೂರ್ತೀಕರಿಸಬೇಕಾದರೆ ಮತ್ತು ಮಹತ್ಕಾರ್ಯಗಳನ್ನು ಸಾಧಿಸಬೇಕಾದರೆ ಈ 'ಇಲ್ಮುಲ್ ಯಕೀನ್'ನ ಪ್ರಾಪ್ತಿಯು ಅತ್ಯಗತ್ಯ. ಪ್ರವಾದಿ ಇಬ್ರಾಹೀಮ್(ಅ)ರಂತೂ ಈ ಖಚಿತ ಜ್ಞಾನದ ಕೊಡುಗೆಯನ್ನು ತನ್ನ ಪ್ರಭುವಿನಿಂದ ಕೇಳಿ ಪಡೆದುಕೊಂಡರು. ಅಂತ್ಯ ದಿನದಂದು ಮಾನವರನ್ನು ಪುನಃ ಜೀವಂತಗೊಳಿಸುವುದರ ಬಗ್ಗೆ ತಿಳಿಯಲು ಅವರು ಅಲ್ಲಾಹನೊಡನೆ ಹೀಗೆ ಪ್ರಾರ್ಥಿಸಿದರು,

وَإِذْ قَالَ إِبْرَاهِيمُ رَبِّ أَرِنِي كَيْفَ تُحْيِي الْمَوْتَىٰ

"ಪ್ರಭೂ, ಮೃತ್ಯುವಶವಾದವರನ್ನು ನೀನು ಹೇಗೆ ಪುನರ್ಭವಗೊಳಿಸುತ್ತೀ ಎಂಬುದನ್ನು ನನಗೆ ತೋರಿಸಿಕೊಡು" ಎಂದು ಇಬ್ರಾಹೀಮರು ಕೇಳಿದ ಸಂದರ್ಭವನ್ನೂ ಸ್ಮರಿಸಿರಿ.

**(ಕುರ್‌ಆನ್ 2:260)**

ಅಲ್ಲಾಹನು ತನ್ನ ಪ್ರಿಯಮಿತ್ರನ ಈ ಬೇಡಿಕೆಯನ್ನು ಪ್ರಶ್ನಿಸುತ್ತಾ ಹೀಗೆ ಕೇಳಿದನು,

قَالَ أَوَلَمْ تُؤْمِنْ

"ಏನು, ನಿಮಗೆ ವಿಶ್ವಾಸವಿಲ್ಲವೇ?" ಎಂದು ಅವನು (ಅಲ್ಲಾಹನು) ಕೇಳಿದನು.

(ಕುರ್‌ಆನ್ 2:260)

ಇಬ್ರಾಹೀಮರು(ಅ) ಇನ್ನಷ್ಟು ವಿನಮ್ರರಾದರು, ಅವರು ಅನುಮಾನಿಸಲಿಲ್ಲ, ನನಗೆ ನನ್ನ ಕಣ್ಣ ಮುಂದೆ ಕಂಡರೆ ಮಾತ್ರವಿಶ್ವಾಸ ಬರುವುದೆಂದು ಕೂಡಾ ಹೇಳಲಿಲ್ಲ, ಬದಲಾಗಿ ವಿನೀತಭಾವದೊಂದಿಗೆ ತನ್ನ ಪ್ರಭುವಿನೊಡನೆ ವಿನಂತಿಸಿದರು,

قَالَ بَلَىٰ وَلَٰكِن لِّيَطْمَئِنَّ قَلْبِي

ಅವರು "ವಿಶ್ವಾಸವಿದೆ; ಆದರೆ ಮನಃಸಂತೃಪ್ತಿ ಬಯಸುತ್ತೇನೆ" ಎಂದರು.

ಆಗ ಅಲ್ಲಾಹನು ಅವರಿಗೆ ಹೀಗೆ ಸೂಚಿಸಿದನು,

(ಕುರ್‌ಆನ್2:260)

قَالَ فَخُذْ أَرْبَعَةً مِّنَ الطَّيْرِ فَصُرْهُنَّ إِلَيْكَ ثُمَّ اجْعَلْ عَلَىٰ
كُلِّ جَبَلٍ مِّنْهُنَّ جُزْءًا ثُمَّ ادْعُهُنَّ يَأْتِينَكَ سَعْيًا وَاعْلَمْ أَنَّ اللَّهَ عَزِيزٌ حَكِيمٌ

ಆಗ ಅಲ್ಲಾಹ್, "ಹಾಗಾದರೆ ನೀನು ನಾಲ್ಕು ಪಕ್ಷಿಗಳನ್ನು ಪಳಗಿಸಿ ಅನಂತರ ಅವುಗಳ ಒಂದೊಂದು ಭಾಗವನ್ನು ಒಂದೊಂದು ಬೆಟ್ಟದ ಮೇಲೆ ಇರಿಸು. ಆಮೇಲೆ ಅವುಗಳನ್ನು ಕೂಗಿ ಕರೆ. ಅವು ನಿನ್ನ ಬಳಿ ಧಾವಿಸಿ ಬರುವುವು. ಅಲ್ಲಾಹ್ ಮಹಾಪ್ರತಾಪಿಯೂ ಯುಕ್ತಿಪೂರ್ಣನೂ ಆಗಿರುತ್ತಾನೆಂಬುದನ್ನು ಅರಿತುಕೊ" ಎಂದನು.

(ಕುರ್‌ಆನ್ 2:260)

ಹೀಗೆ ಮನಸ್ಸಿನ ಸಂತೃಪ್ತಿಯನ್ನು ಪಡೆಯುವ ಏಕೈಕ ಉದ್ದೇಶದಿಂದ ಅವರು ತನ್ನ ಪ್ರಭುವಿನೊಡನೆ ಈ ರೀತಿ ವಿನಂತಿಸಿದ್ದರು. ಇದರಲ್ಲಿ ವಿಶ್ವಾಸದ ಕೊರತೆ ಕಂಡುಬರುವುದಿಲ್ಲ. ಅಂತ್ಯ ದಿನದಂದು ಪುನಃ ಜೀವಂತವಾಗುವ ಬಗ್ಗೆ ಸಂದೇಹವೂ ಇರಲಿಲ್ಲ. ಅದು ತನ್ನ ಕೆಲಸದಿಂದ ಹಿಂಜರಿಯುವ ಲಕ್ಷಣವೂ ಅಲ್ಲ. ತನಗೆ ನೀಡಲಾದ ಜವಾಬ್ದಾರಿಕೆಯನ್ನು ಎಂತಹ ಸಂದರ್ಭದಲ್ಲೂ, ಯಾವುದೇ ಪ್ರತಿಕೂಲ ಪರಿಸ್ಥಿತಿ ಎದುರಾದರೂ ದಿಟ್ಟತನದಿಂದ ಪೂರ್ತಿಗೊಳಿಸಬೇಕಾದರೆ ಅತ್ಯಗತ್ಯವಾದ ಹೃದಯವೈಶಾಲ್ಯ ಮತ್ತು ಮನಃಸಂತೃಪ್ತಿಯ ಪ್ರಾಪ್ತಿಗಾಗಿ ಅವರು ಮಾಡಿದ ಪ್ರಯತ್ನ ಮಾತ್ರ.

ಇಬ್ರಾಹೀಮ(ಅ)ರು ಅಲ್ಲಾಹನೊಂದಿಗೆ ಈ ಪ್ರಾರ್ಥನೆಯನ್ನು ಯಾವ ಕಾಲದಲ್ಲಿ ಮಾಡಿದ್ದರು ಎಂಬ ಬಗ್ಗೆ ಹೆಚ್ಚಿನ ಕುರ್‌ಆನ್ ವ್ಯಾಖ್ಯಾನಕಾರರು ಪ್ರಸ್ತಾಪಿಸಿಲ್ಲ. ಮೌಲಾನಾ ಅಮೀನ್ ಅಹ್ಸನ್ ಇಸ್ಲಾಹಿಯವರು ತಮ್ಮ 'ತದಬ್ಬುರೆ ಕುರ್‌ಆನ್'ನಲ್ಲಿ ಈ ಬಗ್ಗೆ ಪ್ರಸ್ತಾಪಿಸುತ್ತಾ ಅದು ಅವರಿಗೆ ಪ್ರವಾದಿತ್ವ ಲಭಿಸಿದ ಆರಂಭಿಕ ಕಾಲಘಟ್ಟದಲ್ಲಿ ನಡೆದ ಘಟನೆ ಎಂದು ಉಲ್ಲೇಖಿಸುತ್ತಾರೆ.

ದೃಢ ವಿಶ್ವಾಸದ ಅಮೂಲ್ಯ ಕೊಡುಗೆ ಯಾರಿಗೆ ಲಭ್ಯವಾಗುತ್ತದೋ ಅವರು ತಮ್ಮ ವಿಶ್ವಾಸದಲ್ಲಿ ಅಚಲರಾಗಿ, ಸ್ಥಿರವಾಗಿ ನಿಲ್ಲುತ್ತಾರೆ. ಪರ್ವತಗಳಿಗಿರುವಂತಹ ಸ್ಥಿರತೆಯ ಬಲ ಅವರಿಗೆ ಲಭ್ಯವಾಗುತ್ತದೆ. ತಮ್ಮ ದೌತ್ಯ ಸಾಧನೆಗಾಗಿ ಯಾವ ತ್ಯಾಗಕ್ಕೂ ಸಿದ್ಧರಿರುತ್ತಾರೆ. ಇಡೀ ಲೋಕವೇ ಅವರಿಗೆ ಎದುರಾಗಿ ನಿಂತರೂ ಅವರು ತಮ್ಮ ಕರ್ತವ್ಯದಿಂದ ಹಿಂದೆ ಸರಿಯುವುದಿಲ್ಲ. ತಮ್ಮ ಗುರಿಯೆಡೆಗೆ ಅವರ ನೋಟವು ಕೇಂದ್ರೀಕೃತವಾಗಿರುತ್ತದೆ. ಅದರೆಡೆಗೆ ನಡೆಯುವಾಗ ಎದುರಾಗುವ ಸರ್ವ ಅಡಚಣೆಗಳನ್ನು ಅವರು ತೊಡೆದು ಹಾಕುತ್ತಾರೆ. ಅವರು ನಿಷ್ಕಳಂಕ ಹೃದಯದ ಒಡೆಯರಾಗುತ್ತಾರೆ.

ಅಲ್ಲಾಹನು ಈ ಅಮೂಲ್ಯ ಕೊಡುಗೆಯನ್ನು ಇಬ್ರಾಹೀಮ್(ಅ)ರಿಗೆ ನೀಡಿದನಲ್ಲದೆ ಇನ್ನೂ ಹೆಚ್ಚನ್ನು ದಯಪಾಲಿಸಿದನು.

وَكَذَٰلِكَ نُرِي إِبْرَاهِيمَ مَلَكُوتَ السَّمَاوَاتِ وَالْأَرْضِ وَلِيَكُونَ مِنَ الْمُوقِنِينَ

ನಾವು ಇಬ್ರಾಹೀಮರಿಗೆ ಇದೇ ರೀತಿಯಲ್ಲಿ ಭೂಮಿ–ಆಕಾಶಗಳ ಸಾಮ್ರಾಜ್ಯ ವ್ಯವಸ್ಥೆಯನ್ನು ತೋರಿಸಿಕೊಡುತ್ತಿದ್ದೆವು , ಅವರು ದೃಢ ವಿಶ್ವಾಸ ಉಳ್ಳವರಾಗಬೇಕೆಂದು.

(ಕುರ್‌ಆನ್–6:75)



# ಸಂದೇಶ ಪ್ರಚಾರದ ಮಹತ್ಕಾರ್ಯ

ಸಂದೇಶ ಪ್ರಚಾರ ಎಂಬುದು ಒಬ್ಬ ಸಂದೇಶವಾಹಕನ ನೈಜ ದೌತ್ಯ. ತನ್ನನ್ನು ನಿಯೋಗಿಸಲಾದ ಜನಾಂಗಕ್ಕೆ ಸತ್ಪಥದ ಸ್ಪಷ್ಟ ಮಾರ್ಗದರ್ಶನವನ್ನು ನೀಡುವುದು ಅವರ ಆದ್ಯ ಕರ್ತವ್ಯ. ಅವರು ತಮ್ಮ ಜನಾಂಗದ ಹಿತ ಚಿಂತಕರು. ಅಲ್ಲಾಹನ ಶಿಕ್ಷೆಯ ಕುರಿತು ಅವರಿಗೆ ಮುನ್ನೆಚ್ಚರಿಕೆ ನೀಡುವವರು. ತಮ್ಮ ಜನಾಂಗಕ್ಕೆ ಬಾಧಿಸಿರುವ ಸಾಮಾಜಿಕ ಕೆಡುಕುಗಳಿಂದ ಅವರನ್ನು ಮುಕ್ತಿಗೊಳಿಸುವವರು. ಅವರನ್ನು ಸರ್ವ ರೀತಿಯ ಸಂಕೋಲೆಗಳಿಂದ ಬಿಡುಗಡೆಗೊಳಿಸುವವರು. ಅವರಿಗೆ ಶಾಶ್ವತ ಸ್ವರ್ಗದ ದಾರಿ ತೋರಿಸುವವರು. ಪ್ರವಾದಿ ಇಬ್ರಾಹೀಮ್(ಅ)ರು ಕೂಡಾ ತಮಗೆ ಪ್ರವಾದಿತ್ವದ ಮಹತ್ವವಾದ ಜವಾಬ್ದಾರಿಕೆ ಲಭಿಸಿದ ತಕ್ಷಣ ತಮ್ಮ ಈ ದೌತ್ಯವನ್ನು ಕೈಗೆತ್ತಿಕೊಂಡರು. ಕರ್ಮಭೂಮಿಯಲ್ಲಿ ಕಾರ್ಯನಿರತರಾಗಲು ಅನುವಾದರು.

### ಮೊಟ್ಟ ಮೊದಲ ಅಭಿಸಂಬೋಧಿತರು

ಒಬ್ಬ ಸಂದೇಶ ಪ್ರಚಾರಕನ ಮೊಟ್ಟ ಮೊದಲ ಕಾರ್ಯಕ್ಷೇತ್ರ ಅವರದ್ದೇ ಮನೆ, ಕುಟುಂಬ ಮತ್ತು ಜನಾಂಗವಾಗಿರುವುದು ಬಹಳ ಸಹಜವಾದ ವಿಷಯ. ಬಹುದೇವಾರಾಧನೆಯ ಕೇಂದ್ರವಾಗಿದ್ದ ಇಬ್ರಾಹೀಮ್(ಅ)ರ ಜನಾಂಗಕ್ಕೆ ಅವರ ಮನೆಯೇ ಅದರ ಕೇಂದ್ರ ಬಿಂದುವಾಗಿತ್ತು. ಮುಖ್ಯ ದೇವಳದ ಅರ್ಚಕರೂ, ಮೂರ್ತಿಗಳ ಪರಿಣಿತ ಶಿಲ್ಪಿಯೂ ಆದ ವ್ಯಕ್ತಿ ಅವರ ಮನೆಯಲ್ಲೇ ಇದ್ದರು. ಮೂಢನಂಬಿಕೆಗಳಿಗೆ ಬೇಕಾದ ಸಾಮಾನು ಸರಂಜಾಮುಗಳೂ ಅವರ ಮನೆಯಲ್ಲೇ ಲಭ್ಯವಾಗುತ್ತಿತ್ತು. ಹಾಗಿರುವಾಗ ಅವರು ತಮ್ಮ ತಂದೆಯನ್ನೇ ಅಲ್ಲಾಹನ ಸಂದೇಶವನ್ನು ಆಲಿಸಬೇಕಾದ ಮೊದಲ ವ್ಯಕ್ತಿಯಾಗಿ ಆಯ್ದುಕೊಂಡರು. ಸಂದೇಶವಾಹಕರೆಂಬ ನೆಲೆಯಲ್ಲಿ ಅವರಿಗೆ ಸಂದೇಶ ಪ್ರಚಾರದ ಅನುಕ್ರಮವೂ ತಿಳಿದಿತ್ತು ಮತ್ತು ಅದರ ಎಲ್ಲಾ ಶಿಷ್ಟಾಚಾರಗಳನ್ನೂ ಅವರು ಅರಿತಿದ್ದರು. ಅವರು ತಮ್ಮ ತಂದೆಯೊಡನೆ ಹೀಗೆಂದರು,

إِذْ قَالَ لِأَبِيهِ يَا أَبَتِ لِمَ تَعْبُدُ مَا لَا يَسْمَعُ وَلَا يُبْصِرُ وَلَا يُغْنِي عَنكَ شَيْئًا يَا أَبَتِ

إِنِّي قَدْ جَاءَنِي مِنَ الْعِلْمِ مَا لَمْ يَأْتِكَ فَاتَّبِعْنِي أَهْدِكَ صِرَاطًا سَوِيًّا .يَا أَبَتِ لَا تَعْبُدِ

الشَّيْطَانَ إِنَّ الشَّيْطَانَ كَانَ لِلرَّحْمَٰنِ عَصِيًّا .يَا أَبَتِ إِنِّي أَخَافُ أَن يَمَسَّكَ عَذَابٌ مِّنَ

الرَّحْمَٰنِ فَتَكُونَ لِلشَّيْطَانِ وَلِيًّا عَصِيًّا .يَا أَبَتِ إِنِّي أَخَافُ أَن يَمَسَّكَ

يَمَسَّكَ عَذَابٌ مِّنَ الرَّحْمَٰنِ فَتَكُونَ لِلشَّيْطَانِ وَلِيًّا

ಅವರು ತಮ್ಮ ತಂದೆಯೊಂದಿಗೆ "ಅಪ್ಪಾ, ಆಲಿಸಲಾಗದ, ನೋಡಲಾಗದ ಮತ್ತು ತಮ್ಮ ಯಾವ ಕೆಲಸಕ್ಕೂ ಬಾರದ ವಸ್ತುಗಳನ್ನು ತಾವೇಕೆ ಆರಾಧಿಸುತ್ತೀರಿ? ಅಪ್ಪಾ ತಮಗೆ ಬಂದಿರದ ಜ್ಞಾನವೊಂದು ನನಗೆ ಬಂದಿದೆ. ತಾವು ನನ್ನನ್ನು ಅನುಸರಿಸಿರಿ. ನಾನು ತಮಗೆ ನೇರ ಮಾರ್ಗವನ್ನು ತೋರಿಸುವೆನು. ಅಪ್ಪಾ, ತಾವು ಶೈತಾನನ ದಾಸ್ಯ-ಆರಾಧನೆ ಮಾಡಬೇಡಿರಿ. ಶೈತಾನನು ರಹ್ಮಾನನ (ಕರುಣಾನಿಧಿಯ) ಆಜ್ಞೋಲ್ಲಂಘಕನು. ಅಪ್ಪಾ, ತಾವು ರಹ್ಮಾನನ ಶಿಕ್ಷೆಗೆ ಗುರಿಯಾಗಿ ಬಿಡುವಿರಿ ಎಂಬ ಭಯ ನನಗಿದೆ" ಎಂದು ಹೇಳಿದರು.

(ಕುರ್‌ಆನ್ 19: 42–45)

ಇಲ್ಲಿ ತನ್ನ ತಂದೆಯ ನಂಬಿಕೆಗೆ ಅವರು ನೇರವಾಗಿ ಮತ್ತು ದಿಟ್ಟವಾಗಿ ಸವಾಲೆಸೆಯುತ್ತಾರೆ. ಆದರೆ ಆ ಸವಾಲೆಸೆಯುವ ರೀತಿಯಲ್ಲಿ ಕಿಂಚಿತ್ ಅಹಂಕಾರವಿರಲಿಲ್ಲ. ಅದನ್ನು ಅವರು ಅತ್ಯಂತ ವಿನಮ್ರತೆಯೊಂದಿಗೆ, ಹೃದಯಾಂತರಾಳದಿಂದ ಬಹಳ ಕಾಳಜಿಯನ್ನು ತೋರಿ ಮಾಡಿದರು. ಜನರಿಗೆ ಸೃಷ್ಟಿಗಳ ಆರಾಧನೆಯನ್ನು ತೊರೆದು ಸೃಷ್ಟಿಕರ್ತನ ಆರಾಧನೆಯ ಕರೆ ನೀಡುವ ಅತಿ ಮಹತ್ವದ ಕೆಲಸ ಮಾಡಹೊರಟ ಪ್ರತಿಯೊಬ್ಬ ಬೋಧಕನಿಗೂ ಇಬ್ರಾಹೀಮ್(ಅ)ರ ಈ ಸುಂದರವಾದ ಬೋಧನೆಯು ಖಂಡಿತವಾಗಿಯೂ ಆದರ್ಶಪ್ರಾಯವಾಗಿದೆ.

ಆದರೆ ಅವರ ತಂದೆ ಆ ಸಂದೇಶವನ್ನು ಸ್ವೀಕರಿಸಲು ನಿರಾಕರಿಸಿದರು. ಬಹಳ ಕೋಪಗೊಂಡರು. ಮಗನನ್ನು ತರಾಟೆಗೆ ತೆಗೆದುಕೊಂಡರು. ಆವೇಶದಿಂದ ಹೀಗೆಂದರು,

قَالَ أَرَاغِبٌ أَنتَ عَنْ آلِهَتِي يَا إِبْرَاهِيمُ لَئِن لَّمْ تَنتَهِ لَأَرْجُمَنَّكَ وَاهْجُرْنِي مَلِيًّا

"ಇಬ್ರಾಹೀಮ್(ಅ), ನೀನೇನು ನನ್ನ ಆರಾಧ್ಯರಿಂದ ವಿಮುಖನಾದೆಯಾ? ನೀನು (ಈ ನೀತಿಯನ್ನು) ಕೈ ಬಿಡದಿದ್ದರೆ ನಾನು ನಿನ್ನನ್ನು ಕಲ್ಲೆಸೆದು ಕೊಂದು ಹಾಕುವೆನು. ನೀನು ನನ್ನಿಂದ ಶಾಶ್ವತವಾಗಿ ತೊಲಗಿಬಿಡು" ಎಂದರು.

(ಕುರ್‌ಆನ್–19:46)

ಇಬ್ರಾಹೀಮ್(ಅ) ಇನ್ನಷ್ಟು ವಿನಮ್ರರಾಗಿ ಅತ್ಯಂತ ಪ್ರೀತಿಯಿಂದ ತನ್ನ ತಂದೆಗೆ ಉತ್ತರಿಸಿದರು,

قَالَ سَلَامٌ عَلَيْكَ ۖ سَأَسْتَغْفِرُ لَكَ رَبِّي ۖ إِنَّهُ كَانَ بِي حَفِيًّا

ಆಗ ಇಬ್ರಾಹೀಮರು, "ತಮ್ಮ ಮೇಲೆ ಶಾಂತಿ ಇರಲಿ, ತಮ್ಮನ್ನು ಕ್ಷಮಿಸಲಿಕ್ಕಾಗಿ ನಾನು ನನ್ನ ಪ್ರಭುವಿನೊಡನೆ ಪ್ರಾರ್ಥಿಸುವೆನು. ನನ್ನ ಪ್ರಭು ನನ್ನ ಮೇಲೆ ಅತ್ಯಧಿಕ ಕೃಪೆಯುಳ್ಳವನು.

(ಕುರ್‌ಆನ್–19:47)

ಆದರೆ ಅವರ ತಂದೆಯ ಒರಟುತನ ಅವರನ್ನು ದೃತಿಗೆಡಿಸಲಿಲ್ಲ. ಅವರು ತಮ್ಮ ಮೊಟ್ಟಮೊದಲ ಪ್ರಯತ್ನವು ನಿಷ್ಫಲವಾಯಿತೆಂದು ಮರುಗಿ ಕುಳಿತುಕೊಳ್ಳದೆ ಮುಂದಿನ ಕಾರ್ಯಕ್ಷೇತ್ರದೆಡೆಗೆ ಗಮನಹರಿಸಿದರು. ಅವರ ಮುಂದಿನ ಗುರಿ ತಮ್ಮ ಜನಾಂಗವಾಗಿತ್ತು. ಆದರೆ ಜನಾಂಗವನ್ನು ಉದ್ದೇಶಿಸಿ ಮಾತನಾಡಲು ಹೊರಟಾಗ ತಮ್ಮ ತಂದೆಯನ್ನು ಮರೆಯಲಿಲ್ಲ. ಅವರ ಮಾತುಗಳಲೆಲ್ಲಾ ತಂದೆಯನ್ನೂ ಸೇರಿಸಿದರು. ತಮ್ಮ ತಂದೆಯೊಂದಿಗೆ ತಮ್ಮ ಜನಾಂಗಕ್ಕೂ ಅವರ ಪ್ರಭುವಿನ ಪರಿಚಯವನ್ನು ನೀಡಿ ಅವರನ್ನು ನೇರಮಾರ್ಗದೆಡೆಗೆ ಕರೆದಿದ್ದರು,

إِذْ قَالَ لِأَبِيهِ وَقَوْمِهِ مَا هَٰذِهِ التَّمَاثِيلُ الَّتِي أَنْتُمْ لَهَا عَاكِفُونَ. قَالُوا وَجَدْنَا آبَاءَنَا لَهَا عَابِدِينَ. قَالَ لَقَدْ كُنْتُمْ أَنْتُمْ وَآبَاؤُكُمْ فِي ضَلَالٍ مُبِينٍ. قَالُوا أَجِئْتَنَا بِالْحَقِّ أَمْ أَنْتَ مِنَ اللَّاعِبِينَ. قَالَ بَلْ رَبُّكُمْ رَبُّ السَّمَاوَاتِ وَالْأَرْضِ الَّذِي فَطَرَهُنَّ وَأَنَا عَلَىٰ ذَٰلِكُمْ مِنَ الشَّاهِدِينَ

ಅವರು ತಮ್ಮ ತಂದೆ ಹಾಗೂ ತಮ್ಮ ಜನಾಂಗದೊಡನೆ, "ನೀವು ಮಾರು ಹೋಗುತ್ತಿರುವ ಈ ವಿಗ್ರಹಗಳು ಎಂತಹವು" ಎಂದು ಕೇಳಿದ್ದ ಸಂದರ್ಭವನ್ನು ಸ್ಮರಿಸಿರಿ. ಆಗ ಅವರು (ಜನಾಂಗದವರು) , "ನಮ್ಮ ಪೂರ್ವಜರು ಇವುಗಳನ್ನು ಪೂಜಿಸುತ್ತಿರುವುದನ್ನು ನಾವು ಕಂಡಿದ್ದೇವೆ" ಎಂದು ಉತ್ತರಕೊಟ್ಟರು.

ಇವರು(ಇಬ್ರಾಹೀಮ್(ಅ), "ನೀವೂ ನಿಮ್ಮ ಪೂರ್ವಜರೂ ಸ್ಪಷ್ಟ ಪಥಭ್ರಷ್ಟತೆಗೊಳಗಾಗಿದ್ದೀರಿ" ಎಂದಾಗ- ಅವರು, "ನೀನು ನಮ್ಮ ಮುಂದೆ ನಿನ್ನ ಸತ್ಯವನ್ನು ಪ್ರಕಟಿಸುತ್ತಿರುವೆಯೋ ಅಥವಾ ಅಪಹಾಸ್ಯ ಮಾಡುತ್ತೀಯೋ?" ಎಂದು ಕೇಳಿದರು. ಆಗ ಇವರು, "ಇಲ್ಲ, ವಾಸ್ತವದಲ್ಲಿ ಭೂಮಿ-ಆಕಾಶಗಳನ್ನು ಸೃಷ್ಟಿಸಿದ ಪ್ರಭುವೇ ನಿಮ್ಮ ಪ್ರಭುವಾಗಿರುವನು. ಈ ಬಗ್ಗೆ ನಾನು ನಿಮ್ಮ ಮುಂದೆ ಸಾಕ್ಷಿ ಹೇಳುತ್ತೇನೆ.

(ಕುರ್‌ಆನ್-21:52-56)

ಪವಿತ್ರ ಕುರ್‌ಆನಿನಲ್ಲಿ ಇನ್ನೊಂದೆಡೆ ಅವರು ತಮ್ಮ ಜನಾಂಗಕ್ಕೆ ನೇರವಾಗಿ ಏಕದೇವತ್ವದ ಪರಿಕಲ್ಪನೆಯನ್ನು ಸುಂದರವಾಗಿ ವಿವರಿಸುವ ಉಲ್ಲೇಖವಿದೆ. ಅವರ ಮತ್ತು ಅವರ ಜನಾಂಗದವರ ಮಧ್ಯೆ ಇರುವ ಸಂಭಾಷಣೆಯದು. ಆರಾಧನೆಗೆ ಅರ್ಹನಾದವನಲ್ಲಿ ಇರಬೇಕಾದ ಗುಣವಿಶೇಷತೆಗಳನ್ನು ಅವರು ಆ ಸಂಭಾಷಣೆಯಲ್ಲಿ ವಿವರಿಸುತ್ತಾರೆ.

إِذْ قَالَ لِأَبِيهِ وَقَوْمِهِ مَا تَعْبُدُونَ .قَالُوا نَعْبُدُ أَصْنَامًا فَنَظَلُّ لَهَا عَاكِفِينَ .قَالَ
هَلْ يَسْمَعُونَكُمْ إِذْ تَدْعُونَ .أَوْ يَنْفَعُونَكُمْ أَوْ يَضُرُّونَ .قَالُوا بَلْ وَجَدْنَا آبَاءَنَا
كَذَٰلِكَ يَفْعَلُونَ .قَالَ أَفَرَأَيْتُمْ مَا كُنْتُمْ تَعْبُدُونَ أَنْتُمْ وَآبَاؤُكُمُ الْأَقْدَمُونَ .فَإِنَّهُمْ عَدُوٌّ لِي
إِلَّا رَبَّ الْعَالَمِينَ .الَّذِي خَلَقَنِي فَهُوَ يَهْدِينِ .وَالَّذِي هُوَ يُطْعِمُنِي وَيَسْقِينِ .وَإِذَا مَرِضْتُ
فَهُوَ يَشْفِينِ .وَالَّذِي يُمِيتُنِي ثُمَّ يُحْيِينِ .وَالَّذِي أَطْمَعُ أَنْ يَغْفِرَ لِي خَطِيئَتِي يَوْمَ الدِّينِ

ಅವರ ತಮ್ಮ ತಂದೆ ಮತ್ತು ಜನಾಂಗದೊಡನೆ, "ನೀವು ಇದೆಂತಹ ವಸ್ತುಗಳನ್ನು ಪೂಜಿಸುತ್ತಿರುವಿರಿ?" ಎಂದು ಕೇಳಿದಾಗ- ಅವರು, "ಇವು ಕೆಲವು ವಿಗ್ರಹಗಳು, ನಾವು ಇವುಗಳನ್ನು ಪೂಜಿಸುತ್ತೇವೆ ಮತ್ತು ಇವುಗಳ ಸೇವೆಯಲ್ಲೇ ನಿರತರಾಗಿರುತ್ತೇವೆ" ಎಂದರು. ಆಗ ಇವರು ಕೇಳಿದರು, "ನೀವು ಇವುಗಳನ್ನು ಕರೆದು ಪ್ರಾರ್ಥಿಸಿದಾಗ ಇವು ಕೇಳುತ್ತವೆಯೇ ಅಥವಾ ಇವು ನಿಮಗೇನಾದರೂ ಲಾಭವನ್ನಾಗಲಿ, ಹಾನಿಯನ್ನಾಗಲಿ ಉಂಟು ಮಾಡುತ್ತವೆಯೇ?" ಅದಕ್ಕೆ ಅವರು, "ಇಲ್ಲ, ಆದರೆ ನಮ್ಮ ಪೂರ್ವಿಕರು ಹೀಗೆಯೇ ಮಾಡುತ್ತಿರುವುದನ್ನು ನಾವು ಕಂಡಿದ್ದೇವೆ" ಎಂದರು. ಆಗ ಇಬ್ರಾಹೀಮರು ಕೇಳಿದರು: "ನೀವು ಪೂಜಿಸುತ್ತಾ ಬಂದಿರುವ

ವಸ್ತುಗಳನ್ನುನೀವೆಂದಾದರೂ (ಕಣ್ತೆರೆದು) ನೋಡಿದ್ದುಂಟೇ? ನೀವು ಮತ್ತು ನಿಮ್ಮ ಪೂರ್ವಿಕರು ಇವೆಲ್ಲವೂ ನನ್ನ ಶತ್ರುಗಳು. ಸರ್ವಲೋಕಗಳ ಪಾಲಕ ಪ್ರಭು ಒಬ್ಬನ ಹೊರತು- ಅವನು ನನ್ನನ್ನು ಸೃಷ್ಟಿಸಿದನು ಮತ್ತು ಅವನೇ ನನಗೆ ಮಾರ್ಗದರ್ಶನ ನೀಡುತ್ತಾನೆ- ಅವನು ನನಗೆ ಉಣಿಸುತ್ತಾನೆ ಮತ್ತು ಕುಡಿಸುತ್ತಾನೆ- ನಾನು ಕಾಯಿಲೆ ಬಿದ್ದಾಗ ಅವನೇ ನನ್ನನ್ನು ಗುಣಪಡಿಸುತ್ತಾನೆ- ಅವನೇ ನನಗೆ ಮರಣ ಕೊಡುವನು ಮತ್ತು ಪುನಃ ಜೀವಂತಗೊಳಿಸುವನು- ಪ್ರತಿಫಲನೀಡಲಾಗುವ ಆ ದಿನ ಅವನು ನನ್ನ ತಪ್ಪುಗಳನ್ನು ಕ್ಷಮಿಸುವನೆಂದೂ ನಾನು ಅವನಿಂದನಿರೀಕ್ಷಿಸುತ್ತಿದ್ದೇನೆ"ಎಂದು ಹೇಳಿದರು.

(ಕುರ್‌ಆನ್-26:70-82)

ಈ ಸಂಭಾಷಣೆಯಲ್ಲಿ ಇಬ್ರಾಹೀಮ್(ಅ)ರು ದಿಟ್ಟವಾಗಿ ತಮ್ಮ ಜನಾಂಗಕ್ಕೆ ಏಕದೇವತ್ವವನ್ನು ಬೋಧಿಸಿದ್ದಾರೆ. ಸಂದೇಶ ಪ್ರಚಾರದ ಯುಕ್ತಿಯನ್ನು ಪ್ರದರ್ಶಿಸಿದ್ದಾರೆ. 'ನೀವು ಕಣ್ಣು ತರೆದು ನೋಡಿ' ಎಂದು ಅವರಿಗೆ ನೇರ ಸವಾಲೆಸೆದಿದ್ದಾರೆ. ಅವರು ತಮ್ಮ ಪ್ರಭುವಿನ ಸ್ಪಷ್ಟ ಪರಿಚಯವನ್ನು ತಮ್ಮ ಜನಾಂಗದ ಮುಂದೆ ಮುಂದಿರಿಸಿದ್ದಾರೆ.

ಪ್ರಸಿದ್ಧ ಕುರ್‌ಆನ್ ವ್ಯಾಖ್ಯಾನಕಾರರಾದ ಸಯ್ಯದ್ ಮೌದೂದಿಯವರು ಈ ಮೇಲಿನ ಸೂಕ್ತಗಳನ್ನು ಈ ರೀತಿ ವ್ಯಾಖ್ಯಾನಿಸಿದ್ದಾರೆ, "ಇದರಲ್ಲಿ ಕಾಣಸಿಗುವ ಸಂದೇಶ ಪ್ರಚಾರದ ಯುಕ್ತಿಯೆಡೆಗೆ ಗಮನಹರಿಸಲೇಬೇಕು. ಇಬ್ರಾಹೀಮ್(ಅ)ರು (ಅವರ ಪೂರ್ವಜರ ಬಗ್ಗೆ) ನಿಮ್ಮ ಶತ್ರುಗಳು ಎಂದು ಹೇಳದೆ ಅವರು ನನ್ನ ಶತ್ರುಗಳು ಎಂದು ಹೇಳಿದ್ದಾರೆ. ಒಂದು ವೇಳೆ ನಿಮ್ಮ ಶತ್ರುಗಳು ಎಂದು ಹೇಳಿದ್ದರೆ ಅವರ ಜನಾಂಗದವರು ಹಠಸಾಧನೆಗೆ ಇಳಿಯುವ ಸಾಧ್ಯತೆ ಇತ್ತು. ಆದರೆ 'ನನ್ನ ಶತ್ರುಗಳು' ಎಂಬ ವಾಕ್ಯ ಕೇಳಿದ ತಕ್ಷಣ ಅವರು ಚಿಂತನೆಗೆ ಒಳಗಾಗಿರಬಹುದು. ತಮ್ಮ ಮಟ್ಟಿಗೆ ಒಳಿತು ಯಾವುದು ಎಂದು ಯೋಚಿಸುತ್ತಿರಬಹುದು. ಹೀಗೆ ಮನುಷ್ಯನು ಸಹಜವಾಗಿಯೇ ಸ್ವಂತದ ಹಿತೈಷಿಯಾಗಿರುವ ಮತ್ತು ಸ್ವಂತದ ಬಗ್ಗೆ ಎಂದೂ ಕೇಡು ಬಗೆಯದಿರುವಂತಹ ನೈಸರ್ಗಿಕ ಭಾವನೆಯನ್ನು ಅವರಲ್ಲಿ ಬಡಿದೆಬ್ಬಿಸಲು ಪ್ರಯತ್ನಿಸಿದರು. 'ನನಗಂತೂ ನೀವು ಆರಾಧಿಸುವ ಆ ವಸ್ತುಗಳಲ್ಲಿ ನಿಮ್ಮ ನಷ್ಟ ಗೋಚರವಾಗುತ್ತಿದೆ' ಎಂದು ಹೇಳಿ ನನ್ನನ್ನು ನೋಡಿ ನಾನು ಸ್ವತಃ ನನ್ನ ಹಿತಚಿಂತನೆಯ ದೃಷ್ಟಿಯಿಂದಲೇ ಅವುಗಳಿಂದ ದೂರ ಉಳಿದಿದ್ದೇನೆ' ಎಂದು ಹೇಳಿ ಅವರನ್ನು ತಮಗೆ ಯಾವುದು ಒಳಿತು ಎಂಬ ಚಿಂತನೆಯ ಕೋಲಾಹಲವನ್ನು ಅವರ ಮನದಲ್ಲಿ ಮೂಡಿಸಿಬಿಟ್ಟರು. (ತಫ್ಹೀಮುಲ್ ಕುರ್‌ಆನ್-ಸೂರಃ ಅಶ್ಶುಅರಾ-ಟಿಪ್ಪಣಿ 55)

## ಸಂದೇಶ ಪ್ರಚಾರ ಕಾರ್ಯದಲ್ಲಿ ಚಿಂತನೆಗೆ ಲಗ್ಗೆ ಇಡುವಂತಹ ಒಂದು ನವೀನ ವಿಧಾನ

ತರ್ಕಬದ್ಧತೆಯೊಂದಿಗೆ ತಮ್ಮ ವಿಚಾರವನ್ನು ಪ್ರಸ್ತುತಪಡಿಸುವುದು ಎಲ್ಲಾ ಕಾಲದ ಯುಕ್ತಿವಂತರ ಲಕ್ಷಣವಾಗಿದೆ. ಇಬ್ರಾಹೀಮ್(ಅ)ರೂ ತಮ್ಮಲ್ಲಿ ಅಡಗಿರುವ ಏಕದೇವತ್ವದ ಕಲ್ಪನೆಯನ್ನು ತಾರ್ಕಿಕ ವಿವರಣೆಯೊಂದಿಗೆ ಜನರ ಮುಂದಿಡಲು ತೀರ್ಮಾನಿಸಿದರು. ಅವರ ಸಮುದಾಯದ ಜನರು ಸಾವಿರಾರು ಮೂರ್ತಿಗಳ ಆರಾಧನೆಯೊಂದಿಗೆ ಆಕಾಶ ಕಾಯಗಳನ್ನೂ ಪೂಜಿಸುತ್ತಿದ್ದರು. ತಮಗಿಂತ ಅದೆಷ್ಟೋ ಎತ್ತರದಲ್ಲಿರುವ ಸುಂದರವಾದ ಮಿನುಗುವ ಸೂರ್ಯ, ಚಂದ್ರ, ನಕ್ಷತ್ರ, ಗ್ರಹಾದಿಗಳೆಲ್ಲವೂ ಅವರಿಗೆ ಅತ್ಯಂತ ಶಕ್ತಿಶಾಲಿಗಳಾಗಿ ಗೋಚರಿಸಿದವೋ ಏನೋ? ಇಬ್ರಾಹೀಮ್(ಅ)ರು ಅವರ ಈ ತರಹದ ಚಿಂತನೆಗಳನ್ನು ಹಂತಹಂತವಾಗಿ, ತರ್ಕಬದ್ಧವಾಗಿ ಅವರ ಮುಂದೆ ಬಿಡಿಸಿಡುತ್ತಾ ಅವರ ವೈಚಾರಿಕತೆಯನ್ನು ಅಲ್ಲಾಡಿಸುವ ಪ್ರಯತ್ನ ಮಾಡಿದರು. ಅದರಂತೆ ಒಂದು ರಾತ್ರಿ ವಿಶಾಲವಾದ ಆಕಾಶದೆಡೆಗೆ ತಿರುಗಿಕೊಂಡು ತಮ್ಮ ತರ್ಕವನ್ನು ಪ್ರಾರಂಭಿಸಿದರು. ಸೂರಃ ಅಲ್-ಅನ್ಆಮ್ 76 ರಿಂದ 79 ವರೆಗಿನ ಸೂಕ್ತಗಳಲ್ಲಿ ಈ ಘಟನೆಯ ವಿವರಣೆ ಇದೆ.

فَلَمَّا جَنَّ عَلَيْهِ اللَّيْلُ رَأَىٰ كَوْكَبًا قَالَ هَٰذَا رَبِّي

ಒಮ್ಮೆ ರಾತ್ರಿ ಕಾಲವು ಆವರಿಸಿದಾಗ ಅವರೊಂದು ನಕ್ಷತ್ರವನ್ನು ಕಂಡರು. "ಇದು ನನ್ನ ಪ್ರಭು" ಎಂದರು.

ಜನಾಂಗದವರಿಗೆ ಈ ಇಬ್ರಾಹೀಮ್(ಅ) ನಮ್ಮ ವಿಶ್ವಾಸಗಳೆಡೆಗೆ ವಾಲುತ್ತಿದ್ದಾನೆಂದು ಬಗೆದು ಸಂತೋಷವಾಗಿರಬಹುದು. ಆದರೆ ಮರುಕ್ಷಣವೇ ಅವರು ಹೀಗೆಂದರು.

فَلَمَّا أَفَلَ قَالَ لَا أُحِبُّ الْآفِلِينَ

ಆದರೆ ಅದು ಅಸ್ತಮಿಸಿದಾಗ, "ನಾನು ಅಸ್ತಮಿಸುವವರಿಗೆ ಮಾರುಹೋಗುವುದಿಲ್ಲ" ಎಂದರು ಅದೇ ಕ್ಷಣ ಅವರ ಗಮನ ಚಂದ್ರನೆಡೆಗೆ ತಿರುಗಿತು.

فَلَمَّا رَأَى الْقَمَرَ بَازِغًا قَالَ هَٰذَا رَبِّي

ಅನಂತರ ಪ್ರಕಾಶಿಸುತ್ತಿರುವ ಚಂದ್ರನನ್ನು ಕಂಡಾಗ, "ಇದು ನನ್ನ ಪ್ರಭು"

ಎಂದರು. ಅದರ ಶಕ್ತಿಯ ಅಂದಾಜು ಮಾಡುತ್ತಿರುವಾಗಲೇ ಅದು ಮುಳುಗಿತು. ಆಗ ಅವರು ಶಕ್ತಿವಂತನಾದ ತಮ್ಮ ಪ್ರಭುವನ್ನು ಸ್ಮರಿಸಿದರು.

فَلَمَّا أَفَلَ قَالَ لَئِنْ لَمْ يَهْدِنِي رَبِّي لَأَكُونَنَّ مِنَ الْقَوْمِ الضَّالِّينَ

ಆದರೆ ಅದೂ ಮುಳುಗಿದಾಗ, "ನನ್ನ ಪ್ರಭು ನನಗೆ ಮಾರ್ಗದರ್ಶನವನ್ನೀಯದಿರುತ್ತಿದ್ದರೆ ನಾನೂ ಪಥಭ್ರಷ್ಟರಲ್ಲಾಗುತ್ತಿದ್ದೆ" ಎಂದರು. ಬೆಳಗಾಗುತ್ತಲೇ ಕತ್ತಲೆಯನ್ನು ಸೀಳಿ ಎಲ್ಲೆಡೆಯೂ ಪ್ರಕಾಶ ಬೀರುತ್ತಾ ಸೂರ್ಯನ ಆಗಮನವಾಯಿತು.

فَلَمَّا رَأَى الشَّمْسَ بَازِغَةً قَالَ هَٰذَا رَبِّي هَٰذَا أَكْبَرُ

ಅನಂತರ ಪ್ರಕಾಶಮಯವಾದ ಸೂರ್ಯನನ್ನು ಕಂಡು, "ಇದೇ ನನ್ನ ಪ್ರಭು; ಇದು ಎಲ್ಲಕ್ಕಿಂತಲೂ ದೊಡ್ಡದಾಗಿದೆ" ಎಂದರು. ಸಂಜೆಯಾಗುತ್ತಲೇ ಅದು ಶಕ್ತಿಗುಂದುವುದನ್ನು ಕಂಡು ಏಕದೇವತ್ವದ ವಾಸ್ತವಿಕತೆ ಸ್ಪಷ್ಟವಾಗಿ ಗೋಚರಿಸಿತು.

فَلَمَّا أَفَلَتْ قَالَ يَا قَوْمِ إِنِّي بَرِيءٌ مِمَّا تُشْرِكُونَ

ಆದರೆ ಅದೂ ಅಸ್ತಮಿಸಿದಾಗ ಇಬ್ರಾಹೀಮರು ಉದ್ಗರಿಸಿದರು:- "ಓ ನನ್ನ ಜನಾಂಗಬಾಂಧವರೇ, ನೀವು ದೇವನ ಸಹಭಾಗಿಯಾಗಿಸುವವುಗಳಿಂದೆಲ್ಲ ನಾನು ವಿರಕ್ತನು. ತಕ್ಷಣವೇ ಒಂದು ಕ್ಷಣವನ್ನೂ ವ್ಯಯಿಸದೆ ಏಕದೇವತ್ವವನ್ನು ಇಡೀ ಜನಾಂಗದೆದುರು ಘೋಷಿಸಿಬಿಟ್ಟರು. ಸರ್ವಲೋಕಗಳ ಪಾಲಕ ಪ್ರಭುವಿಗೆ ವಿನಮ್ರರಾಗಿ ಶರಣಾಗಿಬಿಟ್ಟರು.

إِنِّي وَجَّهْتُ وَجْهِيَ لِلَّذِي فَطَرَ السَّمَاوَاتِ وَالْأَرْضَ حَنِيفًا ۖ وَمَا أَنَا مِنَ الْمُشْرِكِينَ

"ನಾನು ಏಕನಿಷ್ಠೆಯಿಂದ ನನ್ನ ಮುಖವನ್ನು ಭೂಮಿ-ಆಕಾಶಗಳನ್ನು ಸೃಷ್ಟಿಸಿದವನ ಕಡೆಗೆ ತಿರುಗಿಸಿದೆನು. ನಾನು ಎಷ್ಟು ಮಾತ್ರಕ್ಕೂ ಅಲ್ಲಾಹನೊಂದಿಗೆ ಸಹಭಾಗಿಗಳನ್ನಾಗಿ ಮಾಡುವವರಲ್ಲಿ ಸೇರಿದವನಲ್ಲ"

ಈ ಘಟನೆಯ ವ್ಯಾಖ್ಯಾನದ ಕುರಿತು ಕುರ್‌ಆನ್ ವ್ಯಾಖ್ಯಾನಕಾರರಲ್ಲಿ ಭಿನ್ನಾಭಿಪ್ರಾಯವಿದೆ. ಇಬ್ರಾಹೀಮ್(ಅ)ರು ಆಕಾಶಕಾಯಗಳ ದೈವತ್ವದ ಕುರಿತು ಸ್ವತಃಗೊಂದಲಕ್ಕೊಳಗಾಗಿದ್ದರೋ ಅಥವಾ ಅವರು ಜನರ ಮುಂದೆ ತಾರ್ಕಿಕವಾಗಿ ವಾದಿಸುವ ಸಲುವಾಗಿ ಈ ಚರ್ಚೆಯನ್ನು ಮುಂದಿಟ್ಟಿದ್ದರೋ ಎಂಬ

ಬಗ್ಗೆಯಾಗಿದೆ ಭಿನ್ನಾಭಿಪ್ರಾಯ. ಇವೆರಡೂ ಸಂಭವನೀಯ. ಕೆಲವು ವ್ಯಾಖ್ಯಾನಕಾರರ ಪ್ರಕಾರ ಇಬ್ರಾಹೀಮ್(ಅ)ರು ತಮ್ಮ ಸಂಪೂರ್ಣ ಬಾಲ್ಯವನ್ನು ಒಂದು ಗುಹೆಯಲ್ಲಿ ಕಳೆದಿದ್ದರು. ಅಲ್ಲಿ ಕೇವಲ ಮೂರ್ತಿಪೂಜೆಯನ್ನೇ ನೋಡಿದ್ದರು. ಒಂದಿಷ್ಟು ವರ್ಷಗಳ ನಂತರ ಅವರು ಗುಹೆಯಿಂದ ಮೊದಲ ಬಾರಿಗೆ ಹೊರಬಂದಾಗ ಪ್ರಕೃತಿಯ ಈ ಅದ್ಭುತಗಳು ಗೋಚರವಾಗಿ ಆ ರೀತಿ ಉದ್ಗರಿಸಿರಬಹುದು ಎಂದಿದೆ. ಆದರೆ ಇನ್ನು ಕೆಲವರು ಈ ಅಭಿಪ್ರಾಯವನ್ನು ಒಪ್ಪಿಕೊಳ್ಳುವುದಿಲ್ಲ. ಅವರ ಪ್ರಕಾರ ಆಕಾಶಕಾಯಗಳು ಮತ್ತು ಪ್ರಕೃತಿಯ ಇತರ ಅದ್ಭುತಗಳು ಸದಾ ಕಣ್ಣಮುಂದಿದ್ದರೂ ಮನುಷ್ಯರು ಆ ಬಗ್ಗೆ ಯಾವಾಗಲೂ ಚಿಂತಿಸುತ್ತಾ ಇರುವುದಿಲ್ಲ. ಯಾವುದೋ ಒಂದು ಕ್ಷಣದಲ್ಲಿ ಅವರಿಗೆ ಆ ಬಗ್ಗೆ ಚಿಂತನೆ ಮೂಡಬಹುದು. ನ್ಯೂಟನ್‌ಗೆ ಸೇಬು ಬಿದ್ದಾಗ ಜ್ಞಾನೋದಯವಾದ ಹಾಗೆ, ಸೇಬು ಬೀಳುವುದನ್ನು ಅವನೆಷ್ಟೋ ಬಾರಿ ಅದನ್ನು ನೋಡಿರಬಹುದು. ಅವನಿಗೆ ಆ ಬಗ್ಗೆ ಯೋಚನೆ ಮೂಡಿದ್ದು ಮಾತ್ರ ಆ ಒಂದು ವಿಶೇಷ ಕ್ಷಣದಲ್ಲಿ ಮಾತ್ರ. ಪ್ರವಾದಿ ಇಬ್ರಾಹೀಮ್(ಅ)ರು ಕಣ್ಣು ತೆರೆದದ್ದೇ ಬಹುದೇವಾರಾಧನೆಯ ಕೇಂದ್ರ ಸ್ಥಾನದಲ್ಲಿ. ನಿಷ್ಕಳಂಕ ಮನಸ್ಸಿನ ಒಡೆಯರಾದ ಅವರಿಗೆ ಬಹುದೇವಾರಾಧನೆಯ ಆ ಕಲ್ಪನೆಯನ್ನು ಸ್ವೀಕರಿಸಲು ಸಾಧ್ಯವಾಗದಾಗ ಅವರು ತಮ್ಮ ಚಿಂತನಾ ಶಕ್ತಿಯನ್ನು ಚುರುಕುಗೊಳಿಸಿ ಸುತ್ತಮುತ್ತಲೆಲ್ಲಾ ವೀಕ್ಷಿಸುತ್ತಿದ್ದರು. ಸತ್ಯಾನ್ವೇಷಣೆ ಮಾಡುತ್ತಿದ್ದರು. ತಮಗೆಲ್ಲಾದರೂ ಏಕದೇವತ್ವದ ಪುರಾವೆ ಸಿಗುವುದೋ ಎಂದು ಹುಡುಕುತ್ತಿದ್ದರು. ಆ ಹುಡುಕಾಟದ ವೇಳೆಯಲ್ಲೇ ಈ ಆಕಾಶಕಾಯಗಳ ಕುರಿತು ಚಿಂತಿಸಿ ತಾವೇ ಉತ್ತರ ಕಂಡುಕೊಂಡಿದ್ದರು. ಪ್ರವಾದಿತ್ವದ ನಂತರ ತಮ್ಮ ಮನಸ್ಸಿನಲ್ಲಿ ಎದ್ದ ಅದೇ ವಿಚಾರವನ್ನು ತಾರ್ಕಿಕವಾಗಿ ಅವರು ತಮ್ಮ ಜನಾಂಗದ ಮುಂದಿಟ್ಟದ್ದನ್ನೇ ಈ ಮೇಲಿನ ಸೂಕ್ತಗಳು ವ್ಯಕ್ತಪಡಿಸುತ್ತವೆಂಬುದು ಕುರ್‌ಆನಿನ ಕೆಲವು ವ್ಯಾಖ್ಯಾನಕಾರರ ಅಭಿಪ್ರಾಯ. ಇವರ ಪೈಕಿ ಹಳೆಯ ಕಾಲದ ವ್ಯಾಖ್ಯಾನಕಾರರಾದ ಇಬ್ನ್ ಜರೀರ್ ತಬರಿಯವರೂ ಇದ್ದಾರೆ ಮತ್ತು ಹೊಸ ಕಾಲದ ವ್ಯಾಖ್ಯಾನಕಾರರಾದ ಸಯ್ಯಿದ್ ಕುತುಬ್ ಮತ್ತು ಸಯ್ಯಿದ್ ಮೌದೂದಿಯವರೂ ಇದ್ದಾರೆ. ಈ ಅಭಿಪ್ರಾಯವೇ ಸಮಂಜಸವೆಂದು ಭಾಸವಾಗುತ್ತದೆ.

ಒಟ್ಟಿನಲ್ಲಿ ತಮಗೆ ತೋರಿದ ಗೊಂದಲ ಮತ್ತು ಅದರಿಂದಾದ ಜ್ಞಾನೋದಯವನ್ನು ಜನರ ಮುಂದಿಟ್ಟರೆ ಅವರು ಚಿಂತನೆ ನಡೆಸಬಹುದೆಂಬ ಕಳಕಳಿ ಮತ್ತು ಮಹದಾಸೆಯಿಂದ ಸಂದೇಶ ಪ್ರಚಾರದ ಈ ನವೀನ ರೀತಿಯನ್ನು ಇಬ್ರಾಹೀಮ್(ಅ)ರು ಅವರ ಜನರಲ್ಲಿ ಪ್ರಯೋಗಿಸಿದ್ದರು.

ಇದರಲ್ಲಿ ಇಬ್ರಾಹೀಮ್(ಅ)ರು ಏಕದೇವತ್ವದ ಕಲ್ಪನೆಯನ್ನು ಹಂತಹಂತವಾಗಿ ಬಿಡಿಸಿಟ್ಟಿದ್ದರು. ನಕ್ಷತ್ರಗಳು ಅಸ್ತಮಿಸಿದಾಗ, ನನಗೆ ಅಸ್ತಮಿಸುವ ವಸ್ತುಗಳು ಇಷ್ಟವಲ್ಲ ಎಂದು ಹೇಳಿ ಜನರ ಮನಸ್ಸಿನೊಳಗೆ ಒಂದು ಸಂಶಯದ ಬೀಜ ಬಿತ್ತಿದರು. ಚಂದ್ರನು ಅಸ್ತಮಿಸಿದಾಗ, ನನ್ನ ಪ್ರಭು ನನಗೆ ಮಾರ್ಗದರ್ಶನ ನೀಡದೆ ಇದ್ದಿದ್ದರೆ ನಾನು ಸೋತುಬಿಡುತ್ತಿದ್ದೆ ಎಂದು ಹೇಳಿ ತಮ್ಮ ಪ್ರಭು ಯಾರಾಗಿರಬಹುದು ಎಂದು ಅವರು ಆಲೋಚಿಸುವಂತೆ ಮಾಡಿದರು. ಸೂರ್ಯಾಸ್ತಮಾನವನ್ನು ನೋಡಿ ನಾನಂತೂ ನೀವು ಮಾಡುವ ಈ ದೇವ ಸಹಭಾಗಿತ್ವದಿಂದ ವಿರಕ್ತನು ಎಂದು ಘೋಷಿಸಿ ಅವರನ್ನೊಂದು ತೀರ್ಮಾನ ಮಾಡುವಂತೆ ಬಲವಂತಪಡಿಸಿಬಿಟ್ಟರು. ಈ ಘಟನೆಯು ಅಲ್ಲಿನ ಸಾಮಾನ್ಯ ಬುದ್ಧಿಮತ್ತೆಯ ಜನರ ವಿವೇಚನಾಶಕ್ತಿಯನ್ನು ಕುಲುಕಿತ್ತಲ್ಲದೆ ಮೇಧಾವಿಗಳ ವೈಚಾರಿಕತೆಯನ್ನೂ ಅಲ್ಲಾಡಿಸಿಬಿಟ್ಟರು.



# ಮೂರ್ತಿಗಳ ಮುಖಾಮುಖಿ

ದೇವಳದಲ್ಲಿದ್ದ ಮೂರ್ತಿಗಳು ಜನರ ಸೃಷ್ಟಿಯೇ ಹೊರತು ಅವು ಸೃಷ್ಟಿಕರ್ತನಾಗಲು ಸಾಧ್ಯವಿಲ್ಲ, ಅದಕ್ಕೆ ಸ್ವಂತರಕ್ಷಣೆಯನ್ನೂ ಮಾಡಲು ಶಕ್ತಿಯಿಲ್ಲವೆಂಬುದನ್ನು ತಮ್ಮ ಸಹವಾಸಿಗಳಿಗೆ ತಿಳಿಸಿ ಬೇಸತ್ತು ಹೋದಾಗ ಇಬ್ರಾಹೀಮ್(ಅ) ಚಾಣಾಕ್ಷ ಉಪಾಯವನ್ನು ಕಂಡುಕೊಂಡರು. ಅಲ್ಲಿದ್ದ ಪ್ರತಿಯೊಂದು ಮೂರ್ತಿಯನ್ನು ಸ್ವಲ್ಪ ಕೆಡಹಿ ಒಂದು ದೊಡ್ಡ ಮೂರ್ತಿಯ ಭುಜದಲ್ಲಿ ಕೊಡಲಿಯನ್ನಿಟ್ಟುಬಿಟ್ಟರು. ಜನರು ನೋಡಿ ಹೌಹಾರಿದಾಗ ದೊಡ್ಡಮೂರ್ತಿಯೊಡನೆ ಚಿಕ್ಕಮೂರ್ತಿಗಳಿಗೇನಾಯಿತು ಎಂದು ಕೇಳಿ ನೋಡಿ ಎಂಬ ಸಲಹೆ ನೀಡಿ ಅವರನ್ನು ಚಿಂತನೆಗೊಳಪಡಿಸಿಬಿಟ್ಟರು.

.وَتَاللَّهِ لَأَكِيدَنَّ أَصْنَامَكُمْ بَعْدَ أَنْ تُوَلُّوا مُدْبِرِينَ .فَجَعَلَهُمْ جُذَاذًا إِلَّا كَبِيرًا
لَهُمْ لَعَلَّهُمْ إِلَيْهِ يَرْجِعُونَ قَالُوا مَنْ فَعَلَ هَٰذَا بِآلِهَتِنَا إِنَّهُ لَمِنَ الظَّالِمِينَ .قَالُوا سَمِعْنَا فَتًى
يَذْكُرُهُمْ يُقَالُ لَهُ إِبْرَاهِيمُ .قَالُوا فَأْتُوا بِهِ عَلَىٰ أَعْيُنِ النَّاسِ لَعَلَّهُمْ يَشْهَدُونَ .قَالُوا أَأَنْتَ
فَعَلْتَ هَٰذَا بِآلِهَتِنَا يَا إِبْرَاهِيمُ .قَالَ بَلْ فَعَلَهُ كَبِيرُهُمْ هَٰذَا فَاسْأَلُوهُمْ إِنْ كَانُوا يَنْطِقُونَ

ಮತ್ತು ಅಲ್ಲಾಹನಾಣೆ, ನಾನು ನಿಮ್ಮ ಅನುಪಸ್ಥಿತಿಯಲ್ಲಿ ಖಂಡಿತವಾಗಿಯೂ ನಿಮ್ಮ ವಿಗ್ರಹಗಳನ್ನು ನೋಡಿಕೊಳ್ಳುವೆನು" ಎಂದರು. ಆ ಪ್ರಕಾರ ಇವರು ಅವುಗಳನ್ನು ತುಂಡುತುಂಡಾಗಿ ಮುರಿದು ಹಾಕಿದರು ಮತ್ತು ಅದರ ಕಡೆಗೆ ಅವರು ಗಮನಹರಿಸಲೆಂದು ಅವುಗಳಲ್ಲಿ ದೊಡ್ಡದನ್ನು ಬಿಟ್ಟುಬಿಟ್ಟರು. (ಅವರು ಬಂದು ವಿಗ್ರಹಗಳ ಈ ದುರವಸ್ಥೆಯನ್ನು ಕಂಡು) "ನಮ್ಮ ದೇವರುಗಳಿಗೆ ಈ ಗತಿಮಾಡಿದವನಾರು? ಅವನೊಬ್ಬ ಮಹಾ ಅಕ್ರಮಿಯಾಗಿರಬೇಕು" ಎಂದರು. ಕೆಲವರು ಹೀಗೆ ಹೇಳಿದರು; "ಓರ್ವ ತರುಣನು ಅವುಗಳ ಬಗ್ಗೆ ಪ್ರಸ್ತಾಪಿಸುತ್ತಿದ್ದುದನ್ನು ನಾವು ಕೇಳಿದ್ದೇವು. ಅವನ ಹೆಸರು ಇಬ್ರಾಹೀಮ್(ಅ) ಎಂದಾಗಿದೆ." ಆಗ ಅವರು,

"ಹಾಗಾದರೆ ಅವನನ್ನು ಹಿಡಿದು ಎಲ್ಲರ ಮುಂದೆ ತನ್ನಿರಿ. ಅವನನ್ನು (ಹೇಗೆ ಶಿಕ್ಷಿಸಲಾಗುತ್ತದೆಯೆಂದು) ನೋಡುವಂತಾಗಲಿ" ಎಂದರು. (ಇಬ್ರಾಹೀಮರು ಬಂದಾಗ) "ಓ ಇಬ್ರಾಹೀಮ್(ಅ)! ನಮ್ಮ ದೇವರುಗಳೊಂದಿಗೆ ಹೀಗೆ ವರ್ತಿಸಿರುವುದು ನೀನೇ?" ಎಂದು ಕೇಳಿದರು. ಅವರು, "ಇದನ್ನೆಲ್ಲ ಅವರ ಈ ಹಿರಿಯನು ಮಾಡಿರುತ್ತಾನೆ. ಅವು ಮಾತಾಡುವುದಿದ್ದರೆ ಅವುಗಳನ್ನೇ ಕೇಳಿಕೊಳ್ಳಿರಿ" ಎಂದರು.

(ಕುರ್‌ಆನ್–21:57–63)

## ಅಕ್ರಮಿ ಸಾಮ್ರಾಟನೊಂದಿಗೆ ಗಂಭೀರ ಚರ್ಚೆ

ಕ್ರಾಂತಿಕಾರಿ ಸಮಾಜ ಸುಧಾರಕರ ಸದ್ದಡಗಿಸುವ ಪ್ರಯತ್ನವು ಅನಾದಿ ಕಾಲದಿಂದಲೇ ನಡೆದು ಬರುತ್ತಿರುವ ಪಿಡುಗು. ಅಂದು ಕೂಡಾ ಅದೇ ನಡೆಯಿತು. ನಮ್ರೂದ್ ಎಂಬ ಒಬ್ಬ ಕ್ರೂರ ಸರ್ವಾಧಿಕಾರಿಯು ಆಡಳಿತ ನಡೆಸುತ್ತಿದ್ದ ಕಾಲವಾಗಿತ್ತು ಅದು. ಕ್ರಾಂತಿಕಾರಿಯೊಬ್ಬ ತನ್ನ ಜನರ ವೈಚಾರಿಕತೆಗೆ ಲಗ್ಗೆ ಹಾಕುತ್ತಿದ್ದಾನೆಂದು ಅವನಿಗೆ ಅರಿವಾದಾಗ ಇಬ್ರಾಹೀಮ್(ಅ)ರನ್ನು ಸದೆಬಡಿಯುವ ಶತಪ್ರಯತ್ನ ನಡೆಯಿತು. ಕೊನೆಗೆ ಪ್ರವಾದಿ ಇಬ್ರಾಹೀಮ್(ಅ) ಆ ಸರ್ವಾಧಿಕಾರಿಯ ಮುಖಾಮುಖಿಯಾದರು. ತರ್ಕಬದ್ಧ ಚರ್ಚೆ ಪ್ರಾರಂಭವಾಯಿತು.ಸೂರಃ ಅಲ್ ಬಕರಃದ 258ನೆಯ ಸೂಕ್ತ ಇದನ್ನು ಉಲ್ಲೇಖಿಸುತ್ತದೆ.

'ನಿನ್ನ ಪ್ರಭುವಿನ ಪರಿಚಯ ನೀಡು' ಎಂದು ಇಬ್ರಾಹೀಮ್(ಅ)ರೊಂದಿಗೆ ಹೇಳಲಾಯಿತು.

"ಜೀವನ ಮತ್ತು ಮರಣ ಯಾರ ಅಂಕೆಯಲ್ಲಿದೆಯೋ ಅವನೇ ನನ್ನ ಪ್ರಭು" ಎಂದು ಅವರು ದಿಟವಾಗಿ ಉತ್ತರಿಸಿದರು.

"ಜೀವನ ಮತ್ತು ಮರಣವು ನನ್ನ ಅಧಿಕಾರದಲ್ಲಿದೆ. ಇಲ್ಲಿ ನೆರೆದಿರುವವರ ಪೈಕಿ ಯಾರಿಗೆ ಬೇಕಾದರೂ ಮರಣದಂಡನೆ ನೀಡಬಲ್ಲೆ" ಎಂದು ಆ ದುಷ್ಕರ್ಮಿಯು ಜಂಬಕೊಚ್ಚಿದನು.

ಪ್ರವಾದಿ ಇಬ್ರಾಹೀಮ್(ಅ) ವಿಚಲಿತರಾಗಲಿಲ್ಲ. ಕೋಪಗೊಂಡು ಅಬ್ಬರಿಸಲಿಲ್ಲ. ತನ್ನ ಧರ್ಮನಿಂದನೆಯಾಯಿತೆಂದು ಹಳಿಯಲಿಲ್ಲ. ತನ್ನ ಪ್ರಭುವನ್ನು ಅಪಮಾನಿಸಲಾಯಿತೆಂದು ಮರುಗಿ ಆತ್ಮವಿಶ್ವಾಸದ ಬಲಿ ಕೊಡಲಿಲ್ಲ. ಧೈರ್ಯಗುಂದಿ ಚರ್ಚೆಯನ್ನು ಕೊನೆಗೊಳಿಸಲೂ ಇಲ್ಲ. ಅವರ ಬತ್ತಳಿಕೆಯಲ್ಲಿ ಆ ಕ್ರೂರ ರಾಜನ ಬೌದ್ಧಿಕತೆಗೆ ಸವಾಲೊಡ್ಡುವ ಇನ್ನೂ ಅನೇಕ ಬಾಣಗಳಿದ್ದವು.

ಜೀವನ್ಮರಣ ನಿನ್ನ ಅಂಕೆಯಲ್ಲೂ ಇದೆ ಎಂದು ನೀನು ತರ್ಕಿಸುವುದಾದರೆ ಇದೋ ನಿನಗಿನ್ನೊಂದು ಸವಾಲ್, "ನನ್ನ ಪ್ರಭು ಸೂರ್ಯನನ್ನು ಪೂರ್ವ ದಿಕ್ಕಿನಿಂದ ಮೂಡಿಸುತ್ತಾನೆ. ನೀನದನ್ನು ಪಶ್ಚಿಮ ದಿಕ್ಕಿನಿಂದ ಮೂಡಿಸಿ ತೋರಿಸು" ಎಂದು ಹೇಳಿದಾಗ ಆ ಸತ್ಯನಿಷೇಧಿ ದಿಗ್ಭ್ರಮೆಗೊಂಡನು. ಅವನು ನಿರುತ್ತರನಾದನು.

ಸತ್ಯದ ಪ್ರತಿಪಾದನೆಗಾಗಿ ಇಬ್ರಾಹೀಮ್(ಅ)ರು ಅಂದು ಪ್ರದರ್ಶಿಸಿದ ಈ ಧೈರ್ಯ, ಸ್ಥೈರ್ಯ ಮತ್ತು ಚಾತುರ್ಯವು ಸರ್ವ ಕಾಲಕ್ಕೂ ಮಾದರಿಯಾಗಿದೆ. ಆ ಆಕ್ರಮಿ ರಾಜನ ಆಸ್ಥಾನದಲ್ಲಿ ಅವರು ನಿರ್ಭಯರಾಗಿ ಕಾಲೂರಿ ನಿಂತೇ ಬಿಟ್ಟಿದ್ದರು.

### ಶಿಕ್ಷೆಯೋ? ಅದ್ಭುತವಾದ ಪವಾಡವೋ?

ತಾರ್ಕಿಕತೆ, ವೈಚಾರಿಕತೆ ಮತ್ತು ಬುದ್ಧಿವಂತಿಕೆಯ ಆಧಾರದಲ್ಲಿ ವಾದಿಸಲು ಅಸಮರ್ಥರಾಗಿ ಒಬ್ಬ ನವ ಯುವಕನ ಮುಂದೆ ಸೋತು ನೆಲ ಕಚ್ಚಿದ ಆ ಜನಾಂಗವು ಈಗ ಇಬ್ರಾಹೀಮ್(ಅ)ರನ್ನು ಎದುರಿಸಲು ತಮ್ಮ ಅಧಿಕಾರದ ದುರುಪಯೋಗ ಮಾಡಲು ತೀರ್ಮಾನಿಸಿತು . ಅವರ ಪೈಕಿಯ ಅಕ್ರಮಿಗಳು ಹೀಗೆ ಹೊಂಚು ಹೂಡಿದರು,

قَالُوا ابْنُوا لَهُ بُنْيَانًا فَأَلْقُوهُ فِي الْجَحِيمِ

ಅವರು ಪರಸ್ಪರ ಹೀಗೆಂದರು, "ಇವನಿಗಾಗಿ ಒಂದು ಅಗ್ನಿಕುಂಡವನ್ನು ತಯಾರಿಸಿರಿ ಇವನನ್ನು ಧಗಧಗಿಸುವ ಬೆಂಕಿಯ ರಾಶಿಗೆ ಎಸೆದುಬಿಡಿರಿ."

(ಕುರ್‌ಆನ್–37:97)

ಅವರಲ್ಲಿರುವ ಮುಗ್ಧ ಜನರನ್ನು ಈ ರೀತಿ ಹುರಿದುಂಬಿಸಿದರು,

قَالُوا حَرِّقُوهُ وَانْصُرُوا آلِهَتَكُمْ إِنْ كُنْتُمْ فَاعِلِينَ

"ನಿಮಗೇನಾದರೂ ಮಾಡಬೇಕೆಂದಿದ್ದರೆ ಇವನನ್ನು ಸುಟ್ಟುಹಾಕಿರಿ ಮತ್ತು ನಿಮ್ಮ ದೇವರುಗಳಿಗೆ ನೆರವಾಗಿರಿ" ಎಂದು ಅವರು ಹೇಳಿದರು.

(ಕುರ್‌ಆನ್–21:68)

ಇದು ಅವರೆಲ್ಲರ ಒಂದು ರೀತಿಯ ಮಹಾ ಯೋಜನೆಯಾಗಿತ್ತು. ಎಲ್ಲರೂ ಅತಿ ಭಯಂಕರವಾದ ಅಗ್ನಿಕುಂಡವನ್ನು ನಿರ್ಮಿಸುವ ತಯಾರಿಯಲ್ಲಿ ತೊಡಗಿದರು. ಎಲ್ಲಾ ಕಡೆಗಳಿಂದ ಮರದ ದಿಮ್ಮಿಗಳು ಮತ್ತು ಇತರ ಇಂಧನಗಳ

ಶೇಖರಣೆ ಪ್ರಾರಂಭವಾಯಿತು. ಎಷ್ಟರ ವರೆಗೆಂದರೆ ಒಬ್ಬ ತಾಯಿಯು ತನ್ನ ಮಗು ಅಸೌಖ್ಯದಿಂದ ಬಳಲಿದಾಗ ಅದು ಆರೋಗ್ಯವಂತನಾದಲ್ಲಿ ನಾನು ಇಬ್ರಾಹೀಮನ ಅಗ್ನಿ ಕುಂಡಕ್ಕೆ ಇಂತಿಷ್ಟು ಇಂಧನದ ಕಾಣಿಕೆ ಸಲ್ಲಿಸುವೆನೆಂದು ಹರಕೆ ಹೊರುತ್ತಿದ್ದಳು.

ಕೊನೆಗೆ ಒಂದು ದೊಡ್ಡ ಮೈದಾನದಲ್ಲಿ ಆ ಇಂಧನಗಳನ್ನೆಲ್ಲ ಹಾಕಿ ಬೆಂಕಿ ಹೊತ್ತಿಸಲಾಯಿತು. ಅದೊಂದು ಮಹಾ ಅಗ್ನಿ. ಅದಕ್ಕೆ ಇಂಧನದ ಮಹಾಪೂರವನ್ನೇ ಸುರಿಸಲಾಯಿತು. ಅಗ್ನಿಜ್ವಾಲೆಗಳು ಆಕಾಶದೆತ್ತರಕ್ಕೆ ಏರುತ್ತಿತ್ತು. ಅಗ್ನಿಯ ಧಗಧಗಿಸುವ ಭಯಾನಕ ಶಬ್ಧವು ಜನರ ಮನಸ್ಸುಗಳನ್ನು ಭಯಗ್ರಸ್ತಗೊಳಿಸಿತ್ತು. ಒಂದು ನಾಡಿನ ಸಂಪೂರ್ಣ ಜನಸಂಖ್ಯೆಯು ಒಂಟಿ ಯುವಕನೊಬ್ಬನ ಜೀವದ ಬೆನ್ನು ಹತ್ತಿತ್ತು. ಕೊನೆಗೆ ಇಬ್ರಾಹೀಮ್(ಅ)ರನ್ನು ಬೆಂಕಿಗೆ ಎಸೆದರು. ಪ್ರಸಿದ್ಧ ವಿದ್ವಾಂಸರಾದ ಮೌಲಾನಾ ಮುಫ್ತಿ ಮುಹಮ್ಮದ್ ಶಫಿಯವರು ತಮ್ಮ ಕುರ್‌ಆನ್ ವ್ಯಾಖ್ಯಾನ ಗ್ರಂಥದಲ್ಲಿ ಇದರ ವಿವರಣೆಯನ್ನು ನೀಡುತ್ತಾ, 'ಅಗ್ನಿಯ ಕಾವು ಎಷ್ಟು ತೀವ್ರವಾಗಿತ್ತೆಂದರೆ ಜನರು ಅದರ ಬಳಿ ಸುಳಿಯದಾದರು. ಹಾಗಾಗಿ ಇಬ್ರಾಹೀಮ್(ಅ)ರನ್ನು ಅವರು ಸ್ವತಃ ಹಿಡಿದು ಎಸೆಯಲು ಮುಂದಾಗದೆ ಬಹಳ ದೂರದಲ್ಲಿ ಒಂದು ತೂಗು ಹಗ್ಗಕ್ಕೆ ಕಟ್ಟಿ ಅವರನ್ನು ಆ ಅಗ್ನಿಕುಂಡಕ್ಕೆ ದೂಡಿಬಿಟ್ಟರು' ಎಂದು ಹೇಳಿದ್ದಾರೆ.

(ಮ'ಆರಿಫುಲ್ ಕುರ್‌ಆನ್ ಸೂರಃ ಅಂಬಿಯಾ – ಟಿಪ್ಪಣಿ ಸೂಕ್ತ-69)

ನೆರೆದ ಜನಸ್ತೋಮವು ಹುಚ್ಚೆದ್ದು ಕುಣಿಯಿತು. ತಮ್ಮ ಯೋಜನೆಯು ಕಾರ್ಯಗತವಾದ ಸಂತೋಷದಲ್ಲಿ ಸಂಭ್ರಮಿಸಿತು. ಆದರೆ ಅಲ್ಲಾಹನು ತನ್ನ ಇಷ್ಟದಾಸನ ಸಂರಕ್ಷಣೆಯ ವ್ಯವಸ್ಥೆ ಮಾಡಿದ್ದನು. ಅಲ್ಲಾಹನು ಹೇಳುತ್ತಾನೆ,

فَأَرَادُوا بِهِ كَيْدًا فَجَعَلْنَاهُمُ الْأَسْفَلِينَ

ಅವರು ಇವರ ವಿರುದ್ಧ ಒಂದು ಕಾರ್ಯಾಚರಣೆ ನಡೆಸಲು ಬಯಸಿದ್ದರು. ಆದರೆ, ನಾವು ಅವರನ್ನೇ ಕೀಳಾಗಿಸಿಬಿಟ್ಟೆವು.

(ಕುರ್‌ಆನ್-37:98)

ಸರ್ವಶಕ್ತನಾದ ಪ್ರಭು ಆಗ ಅಗ್ನಿಗೆ ಆದೇಶ ನೀಡಿದನು–

قُلْنَا يَا نَارُ كُونِي بَرْدًا وَسَلَامًا عَلَىٰ إِبْرَاهِيمَ. وَأَرَادُوا بِهِ كَيْدًا فَجَعَلْنَاهُمُ الْأَخْسَرِينَ

ನಾವು ಹೇಳಿದೆವು: "ಓ ಅಗ್ನಿಯೇ, ತಣ್ಣಗಾಗಿಬಿಡು ಮತ್ತು ಇಬ್ರಾಹೀಮರ ಪಾಲಿಗೆ ಸುರಕ್ಷೆಯಾಗು". ಅವರು, ಇಬ್ರಾಹೀಮರಿಗೆ ಕೇಡುಂಟು ಮಾಡಬಯಸಿದ್ದರು. ಆದರೆ ನಾವು ಅವರನ್ನು ಸಂಪೂರ್ಣ ವಿಫಲಗೊಳಿಸಿಬಿಟ್ಟೆವು. (ಕುರ್‌ಆನ್-21:69,70)

ಇದೊಂದು ಅದ್ಭುತವಾದ ಪವಾಡ! ಇದು ಪವಾಡವೆಂಬುದು ಸಂಶಯಾತೀತ! ವಾಸ್ತವದಲ್ಲಿ ಇಂತಹ ಪವಾಡ ಆಗಲೇಬೇಕಿತ್ತು. ಇಬ್ರಾಹೀಮರ ಪ್ರಭುವಿನ ಅಸ್ತಿತ್ವ ಮತ್ತು ಸರ್ವಶ್ರೇಷ್ಠತೆಯನ್ನು ಸಾಬೀತುಪಡಿಸಲು ಆ ಪವಾಡ ಬೇಕೇಬೇಕಿತ್ತು. ಬಹುದೇವಾರಾಧಕರು ಮತ್ತು ಅವರ ಆರಾಧ್ಯರುಗಳ ಅಸಹಾಯಕತೆಯನ್ನು ತೋರ್ಪಡಿಸಲು ಆ ಪವಾಡ ಅತ್ಯಗತ್ಯವಾಗಿತ್ತು. ಆದರೆ ಇಷ್ಟಾದರೂ ಆ ಜನರ ಮನಸ್ಸು ಬದಲಾಗಲಿಲ್ಲ. ವಿವೇಚನೆಯಿಲ್ಲದ ಮೃತ ಸಮುದಾಯವಾಗಿತ್ತು ಅದು.

□

# ವಲಸೆಯ ಅನಿವಾರ್ಯತೆ

ನಮ್ರೂದ್‌ನ ಕ್ರೌರ್ಯದ ಪರಿಚಯವಿರುವ ನಾಗರಿಕರು ಆತನ ಭಯದಿಂದಾಗಿ ಇಬ್ರಾಹೀಮ್(ಅ)ರಿಗೆ ಎಲ್ಲ ರೀತಿಯ ಬೆಂಬಲವನ್ನು ನಿರಾಕರಿಸಿದರು. ತಾನು ನಂಬಿರುವ ಸತ್ಯವನ್ನು ಪ್ರತಿಪಾದಿಸಲು ಮತ್ತು ನ್ಯಾಯಕ್ಕಾಗಿ ಧ್ವನಿ ಎತ್ತಲು ಅವರು ಒಬ್ಬರೇ ಎದ್ದು ನಿಂತರು. ಅವರು ತಮ್ಮ ಕಾರ್ಯಬದ್ಧತೆಯೊಂದಿಗೆ ಸಂಧಾನ ಮಾಡಲಿಲ್ಲ.

ತನ್ಮಧ್ಯೆ ಇಬ್ರಾಹೀಮ್(ಅ)ರಿಗೆ 'ಸಾರಾ' ಎಂಬ ಯುವತಿಯೊಡನೆ ವಿವಾಹವಾಗಿತ್ತು. ಅವರ ಸಹೋದರ ಪುತ್ರನಾದ ಲೂತ್ ಎಂಬ ತರುಣ ಅವರ ಏಕೈಕ ಒಡನಾಡಿಯೂ ಆಗಿದ್ದರು. ತಮ್ಮ ಸಮುದಾಯದ ಪಥಭ್ರಷ್ಟತೆಯಿಂದಾಗಿ ಇಬ್ರಾಹೀಮ್(ಅ)ರು ಬಹಳ ದುಃಖಿತರಾಗಿದ್ದರು. ಅವರು ಹುಟ್ಟಿ ಬೆಳೆದ ನಾಡಲ್ಲೇ ಅವರಿಗೆ ಉಸಿರುಗಟ್ಟಿದ ಅನುಭವವಾಯಿತು. ತಾಯ್ನೆಲೆ ತ್ಯಜಿಸದೆ ಬೇರೆ ದಾರಿ ಇರಲಿಲ್ಲ. ಅಲ್ಲಿಂದ ವಲಸೆ ಹೋಗುವ ತೀರ್ಮಾನವಾಯಿತು. ಪತ್ನಿ ಸಾರಾ ಮತ್ತು ಸೋದರಪುತ್ರ ಲೂತ್ ಅವರ ಜೊತೆ ಹೋಗುವುದೆಂದು ನಿರ್ಧಾರವಾಯಿತು. ಹೊರಡುವಾಗ ಅವರು ಅತ್ಯಂತ ಬೇಸರದಿಂದ ಹೀಗೆಂದರು–

"ನಾವು ನಿಮ್ಮಿಂದ ಹಾಗೂ ನೀವು ಅಲ್ಲಾಹನನ್ನು ಬಿಟ್ಟು ಪೂಜಿಸುತ್ತಿರುವ ಈ ಆರಾಧ್ಯ ವಸ್ತುಗಳಿಂದ ಸಂಪೂರ್ಣ ಅಸಂತುಷ್ಟರಾಗಿದ್ದೇವೆ. ನಾವು ನಿಮ್ಮನ್ನು ಧಿಕ್ಕರಿಸಿದೆವು. ನೀವು ಏಕೈಕನಾದ ಅಲ್ಲಾಹನ ಮೇಲೆ ವಿಶ್ವಾಸವಿರಿಸುವವರೆಗೆ ನಮ್ಮನಿಮ್ಮೊಳಗೆ ಶಾಶ್ವತವಾಗಿ ದ್ವೇಷ ಮತ್ತು ವೈರತ್ವ ಉಂಟಾಯಿತು" ಎಂದು ಸ್ಪಷ್ಟವಾಗಿ ಹೇಳಿಬಿಟ್ಟರು. (ಕುರ್‌ಆನ್–60:4)

ತಾನು ಅಲ್ಲಾಹನಿಗಾಗಿ ಹಿಜ್ರಾ ಮಾಡುತ್ತಿದ್ದೇನೆಂದೂ ಆತನು ತನಗೆ ಖಂಡಿತವಾಗಿಯೂ ಮಾರ್ಗದರ್ಶನ ನೀಡುತ್ತಾನೆಂದೂ ಅವರಿಗೆ ಅಚಲ ವಿಶ್ವಾಸವಿತ್ತು. ಕುರ್‌ಆನ್ ಅವರ ಈ ವಿಶ್ವಾಸವನ್ನು ಪ್ರಸ್ತಾಪಿಸುತ್ತದೆ,

فَآمَنَ لَهُ لُوطٌ ۘ وَقَالَ إِنِّي مُهَاجِرٌ إِلَىٰ رَبِّي

ಆಗ ಲೂತರು ಅವರ ಮೇಲೆ ವಿಶ್ವಾಸವಿರಿಸಿದರು ಮತ್ತು ಇಬ್ರಾಹೀಮರು, ನಾನು ನನ್ನ ಪ್ರಭುವಿನತ್ತ 'ವಲಸೆ' ಹೋಗುತ್ತೇನೆ. ಅವನು ಮಹಾಪ್ರಬಲನೂ ಯುಕ್ತಿಪೂರ್ಣನೂ ಆಗಿರುತ್ತಾನೆಂದರು.

(ಕುರ್‌ಆನ್–29:26)

وَقَالَ إِنِّي ذَاهِبٌ إِلَىٰ رَبِّي سَيَهْدِينِ

ಇಬ್ರಾಹೀಮರು ಹೇಳಿದರು– "ನಾನು ನನ್ನ ಪ್ರಭುವಿನ ಕಡೆಗೆ ಹೋಗುತ್ತೇನೆ. ಅವನೇ ನನಗೆ ಮಾರ್ಗದರ್ಶನ ಮಾಡುವನು".

(ಕುರ್‌ಆನ್–37:99)

ಇಬ್ರಾಹೀಮ್(ಅ)ರಿಗೆ ತಮ್ಮ ನಾಡಿನಲ್ಲಿ ತಮ್ಮ ತತ್ವಾದರ್ಶಗಳನ್ನು ಪ್ರಚುರಪಡಿಸಲು ಸಾಧ್ಯವಿಲ್ಲವೆಂದು ಮನಗಂಡಾಗ ಅವರು ಆದರ್ಶದ ತ್ಯಾಗ ಮಾಡಲಿಲ್ಲ. ನಿರಾಶರಾಗಿ ನಿಷ್ಕ್ರಿಯರಾಗಲಿಲ್ಲ. ದಂಗೆಯೆದ್ದು ರಕ್ತಪಾತಕ್ಕಾಗಿ ಜನರನ್ನು ಹುರಿದುಂಬಿಸಲಿಲ್ಲ ಬದಲಾಗಿ ತಾನು ಹುಟ್ಟಿ ಬೆಳೆದ ಭೂಮಿಯನ್ನೇ ತ್ಯಜಿಸಿದರು. ಇನ್ನೊಂದು ಕರ್ಮಭೂಮಿಯನ್ನು ಅರಸಲು ಹೊರಟರು.

❑

# ಹೊಸ ಕರ್ಮಭೂಮಿಗಾಗಿ ದೇಶಾಟನೆ

ಇಬ್ರಾಹೀಮ್(ಅ) , ಪತ್ನಿ ಸಾರಾ ಮತ್ತು ಸೋದರ ಪುತ್ರ ಲೂತ್(ಅ) ಹುಟ್ಟೂರನ್ನು ಬಿಟ್ಟು ಹೊರಟು ನಿಂತರು. ಕನ್‌ಆನ್ ಎಂಬ ನಾಡಿನೆಡೆಗೆ ಆಗಿತ್ತು ಅವರ ಪ್ರಯಾಣ. ಕನ್‌ಆನ್ ಅಂದರೆ ಇಂದಿನ ಸಿರಿಯಾ ಮತ್ತು ಪ್ಯಾಲೆಸ್ತೀನ್ ಇರುವ ಪ್ರದೇಶ. ಬಹಳ ಫಲವತ್ತಾದ ತಾಣ. ನದಿಗಳು ಹರಿಯುವ, ಸಾಕಷ್ಟು ಮಳೆಸುರಿಯುವ, ಫಲಪುಷ್ಪಗಳ ಸೌಂದರ್ಯದಿಂದ ಕಂಗೊಳಿಸುವ, ಎಲ್ಲೆಡೆಯೂ ಕಣ್ಣಿಗೆ ತಂಪೆರೆಚುವ ಹರಿದ್ವರ್ಣದ ಮೋಹಕ ಸೊಬಗಿರುವ ಸಮೃದ್ಧ ಭೂಭಾಗ. ಪವಿತ್ರ ಕುರ್‌ಆನ್ ಆ ಪ್ರದೇಶವನ್ನು ಸಮೃದ್ಧಿಯ ನಾಡೆಂದು ಬಣ್ಣಿಸಿದೆ.

وَنَجَّيْنَاهُ وَلُوطًا إِلَى الْأَرْضِ الَّتِي بَارَكْنَا فِيهَا لِلْعَالَمِينَ

**ಮತ್ತು ನಾವು ಅವರನ್ನೂ (ಇಬ್ರಾಹೀಮರನ್ನು) ಲೂತರನ್ನೂ ರಕ್ಷಿಸಿದೆವು ಮತ್ತು ಲೋಕವಾಸಿಗಳಿಗೆ ನಾವು ಸಮೃದ್ಧಿಯನ್ನಿರಿಸಿರುವಂತಹ ಭೂಭಾಗಕ್ಕೆ ಅವರನ್ನು ಕೊಂಡೊಯ್ದೆವು.**

**(ಕುರ್‌ಆನ್–21:71)**

ಕನ್‌ಆನ್ ನಗರದಲ್ಲಿ ಅಲ್ಪಕಾಲದ ವಾಸ್ತವ್ಯದ ನಂತರ ಇಬ್ರಾಹೀಮ್(ಅ) ತಮ್ಮ ಪತ್ನಿ ಮತ್ತು ಲೂತ್(ಅ)ರೊಂದಿಗೆ ಈಜಿಪ್ಟಿಗೆ ಪ್ರಯಾಣ ಬೆಳಸಿದರು. ಪವಿತ್ರ ಕುರ್‌ಆನ್ ಅವರ ಈಜಿಪ್ಟ್ ಯಾತ್ರೆಯ ಕಾರಣದ ಕುರಿತು ಹೆಚ್ಚೇನೂ ಹೇಳುವುದಿಲ್ಲ. ಬೈಬಲ್‌ನ ಹಳೆಯ ಒಡಂಬಡಿಕೆಯಲ್ಲಿ ಕನ್‌ಆನ್‌ನಲ್ಲಿ ಬರಗಾಲ ಬಂದುದರಿಂದ ಅವರು ಈಜಿಪ್ಟಿಗೆ ಹೋದರು ಎಂದು ಹೇಳಲಾಗಿದೆ. ಒಟ್ಟಿನಲ್ಲಿ ಆ ಮೂವರೂ ತಮ್ಮ ದೇಶಾಟನೆಯನ್ನು ಮುಂದುವರಿಸಿದರು. ಹೋದಲ್ಲೆಲ್ಲಾ ಇಬ್ರಾಹೀಮ್(ಅ) ತಮ್ಮ ಪ್ರವಾದಿತ್ವದ ದೌತ್ಯವನ್ನು ಎತ್ತಿಹಿಡಿದರು. ಅದಕ್ಕೆ ಅವರು ಇತರೆಲ್ಲಾ ಕಾರ್ಯಗಳಿಗಿಂತ ಹೆಚ್ಚು ಪ್ರಾಶಸ್ತ್ಯ ಏಕದೇವಾರಾಧನೆಯನ್ನು

ಅವರು ಗಟ್ಟಿಯಾಗಿ ಘೋಷಿಸಿದ್ದರು. ಒಳಿತಿನ ಪ್ರಚಾರ ಮತ್ತು ಸಮಾಜ ಸೇವೆಯೂ ಅವರ ಆದ್ಯತೆಯಾಗಿತ್ತು.

ಈಜಿಪ್ಟ್ ಆ ಕಾಲದಲ್ಲಿ ಒಂದು ಅಭಿವೃದ್ಧಿ ಹೊಂದಿದ ದೇಶ. ಸಿರಿವಂತರ ತಾಣ. ಸಮೃದ್ಧವಾದ ವ್ಯಾಪಾರ ಕೇಂದ್ರ, ಕೃಷಿ ಉತ್ಪನ್ನಗಳಿಗೆ ನೆರೆರಾಷ್ಟ್ರಗಳಲ್ಲೆಲ್ಲಾ ಬಹಳ ಹೆಸರುವಾಸಿ, ಕಟ್ಟಡ ನಿರ್ಮಾಣದಲ್ಲಿ ಅಲ್ಲಿನ ಜನರು ನಿಪುಣರು. ಅಂತಹ ಸಮಾಜದಲ್ಲಿ ಇಬ್ರಾಹೀಮ್(ಅ)ರಿಗೆ ಮಾನ್ಯತೆ ಸಿಕ್ಕಿತ್ತು. ಅವರು ಅಲ್ಲಿ ನೆಲೆಸಿ ಸೃಷ್ಟಿಕರ್ತನ ಸಂದೇಶವನ್ನು ಪ್ರಚುರಪಡಿಸುವಲ್ಲಿ ಕಾರ್ಯನಿರತರಾಗಿದ್ದರು. ಜನರನ್ನು ತಮ್ಮೆಡೆಗೆ ಆಕರ್ಷಿಸುವ ಪ್ರಭಾವಶಾಲಿ ವ್ಯಕ್ತಿತ್ವ ಅವರದ್ದು. ಮಾತಿನಲ್ಲಿ ನಯ–ವಿನಯ, ಜನಸೇವೆಯಲ್ಲಿ ಸದಾ ಮುಂದು ಮತ್ತು ಅತ್ಯಂತ ಉನ್ನತ ಚಾರಿತ್ರ್ಯದ ಒಡೆಯರಾಗಿದ್ದ ಅವರು ಸಹಜವಾಗಿಯೇ ಜನನಾಯಕರೆನಿಸಿಕೊಂಡರು. ಅಲ್ಲಿನ ಸಾಮ್ರಾಟನೂ ಅವರಿಂದ ಸಂತೃಪ್ತರಾಗಿದ್ದರು.

ಏಕದೇವತ್ವದ ಪಾಠವನ್ನು ನೆರೆಯ ದೇಶಗಳಲ್ಲೂ ಪಸರಿಸಬೇಕಾಗಿತ್ತು. ತನ್ನೊಬ್ಬನಿಂದ ಅದು ಸಾಧ್ಯವಿಲ್ಲ ಎಂದು ಇಬ್ರಾಹೀಮ್(ಅ) ಮನಗಂಡಾಗ ತನ್ನ ಸಹೋದರ ಪುತ್ರನಾದ ಲೂತ್(ಅ)ರನ್ನು ಆ ಕೆಲಸಕ್ಕಾಗಿ ಬೇರೆ ಕಡೆಗೆ ಕಳುಹಿಸಲು ನಿರ್ಧರಿಸಿದರು. ಹಾಗಾಗಿ ಲೂತ್(ಅ) ಈಜಿಪ್ಟಿನಿಂದ ಬೇರೆ ಕಡೆಗೆ ಹೋಗುವಂತಾಯಿತು. ಅಲ್ಲಾಹನು ಅವರನ್ನೂ ತನ್ನ ಪ್ರವಾದಿಯಾಗಿ ನಿಯೋಗಿಸಿದನು. ಇಬ್ರಾಹೀಮ್(ಅ)ರು ಲೂತ್(ಅ)ರನ್ನು ಕನ್‌ಆನ್ ದೇಶದ ದಕ್ಷಿಣ ಭಾಗದಲ್ಲಿ ಮೃತಸಾಗರದ(Dead Sea) ಬಳಿ ಇದ್ದ 'ಸದೂಮ್' ಮತ್ತು 'ಗೊಮೋರಾ' ಎಂಬ ಅವಳಿ ನಗರಕ್ಕೆ ಕಳುಹಿಸಿದರು.

ಇಬ್ರಾಹೀಮ್‌ರಿಗೆ ಸಂದೇಶ ಪ್ರಚಾರದ ಹೊಣೆಯನ್ನು ಹೊರಲು ಇನ್ನಷ್ಟು ಜನರ ಅಗತ್ಯವಿದೆ ಎಂದವರಿಗೆ ಅನಿಸತೊಡಗಿತು. ಲೋಕ ಕಲ್ಯಾಣದ ಕುರಿತು ಅವರಲ್ಲಿದ್ದ ಕಳಕಳಿ ಬಹಳ ಅಪೂರ್ವ. ಇಬ್ರಾಹೀಮ್(ಅ)ರಿಗೆ ಇನ್ನೂ ಸಂತಾನಭಾಗ್ಯ ಲಭಿಸಿರಲಿಲ್ಲ. ತನ್ನ ನಂತರ ಈ ಕೆಲಸವನ್ನು ಮುಂದುವರಿಸುವವರು ಯಾರು ಎಂಬ ಚಿಂತೆ ಸಹಜವಾಗಿಯೇ ಅವರನ್ನು ಕಾಡುತ್ತಿತ್ತು. ತನಗೆ ಸಂತಾನವಿರುತ್ತಿದ್ದರೆ ಅವರಿಗೆ ಈ ಹೊಣೆಗಾರಿಕೆಯನ್ನು ನಿಭಾಯಿಸುವ ತರಬೇತಿ ನೀಡಬಹುದಿತ್ತು ಎಂದು ಆಶಿಸಿದರು. ತನಗೆ ಸಂತಾನ ಪ್ರಾಪ್ತಿಯಾಗುವ ವಯಸ್ಸು ಮೀರುತ್ತಿದೆ ಎಂದು ಮಾನವರಿಕೆಯಾದರೂ ಅಲ್ಲಾಹನಲ್ಲಿ ಈ ಸಮಸ್ಯೆಯ ಪರಿಹಾರವಿದೆ ಎಂಬ ಬಲವಾದ ನಂಬಿಕೆ ಅವರಿಗೆ. ಸಂತಾನಕ್ಕಾಗಿ ಸೃಷ್ಟಿಕರ್ತನ ಮೊರೆಹೋಕ್ಕರು.

رَبِّ هَبْ لِي مِنَ الصَّالِحِينَ

**ಪ್ರಭು! ನನಗೆ ಸಜ್ಜನನಾದ (ಸಜ್ಜನರ ಸಾಲಿಗೆ ಸೇರುವ) ಒಬ್ಬ ಮಗನನ್ನು ದಯಪಾಲಿಸು.**

**(ಕುರ್‌ಆನ್–37:100)**

ಹೀಗೆಂತೋ ಒಂದಿಷ್ಟು ಕಾಲವನ್ನು ಈಜಿಪ್ಟಿನಲ್ಲಿ ಕಳೆದು ಇಬ್ರಾಹೀಮ್(ಅ)ಕನ್‌ಆನ್ ದೇಶಕ್ಕೆ ಹಿಂದಿರುಗಲು ತೀರ್ಮಾನಿಸಿದರು. ಹಿಂದಿರುಗಲನುವಾದಾಗ ಅಲ್ಲಿನ ಸಾಮ್ರಾಟನು ಅವರನ್ನು ಸನ್ಮಾನಿಸಿ ಅವರಿಗೆ ಅನೇಕ ಕೊಡುಗೆಗಳನ್ನು ನೀಡಿದನು. ಚಿನ್ನ, ಬೆಳ್ಳಿ, ಆಹಾರ ಸಾಮಗ್ರಿಗಳು ಮತ್ತು ಜಾನುವಾರುಗಳೊಂದಿಗೆ ಒಬ್ಬ ಸೇವಕಿಯನ್ನೂ ನೀಡಿದನು. ಆ ಸೇವಕಿಯ ಹೆಸರು 'ಹಾಜಿರಾ' ಎಂದಾಗಿತ್ತು.

## ಸಮೃದ್ಧ ಭೂಮಿಯೆಡೆಗೆ ಮತ್ತೊಮ್ಮೆ

ಮತ್ತೆ ಮೂವರ ಪಯಣವಾಯಿತು. ಈ ಬಾರಿ ಪತ್ನಿ ಸಾರಾರೊಂದಿಗೆ ಸೋದರ ಪುತ್ರನಿರಲಿಲ್ಲ. ಬದಲಾಗಿ ಹಾಜಿರಾ ಎಂಬ ಸೇವಕಿ ಇದ್ದರು. ಇತ್ತ ಸಂತಾನಾಭಿಲಾಷೆ ಬಲವಾಗುತ್ತಾ ಹೋಗುತ್ತಿತ್ತು, ಅತ್ತ ವಯಸ್ಸು ಯಾರನ್ನೂ ಕಾಯದೆ ತೀವ್ರಗತಿಯಲ್ಲಿ ಸಾಗುತ್ತಿತ್ತು. ಪತ್ನಿ 'ಸಾರಾ'ರಿಗೇನೋ ಒಂದು ತರಹದ ಕೊರಗು. ತಾನು ಬಂಜೆಯಾಗಿರುವುದು ತನ್ನ ಪತಿಗೆ ದುಃಖ ನೀಡಿದೆ ಎಂಬ ಚಿಂತೆ. ಪತಿಯ ಕೆಲಸಗಳನ್ನು ಮುಂದುವರಿಸುವವರಾರು ಎಂಬ ವ್ಯಸನ. ತಾನು ಹೇಗೆ ಸ್ಪಂದಿಸಬೇಕು ಎಂಬ ಮಂಥನ ಮನಸ್ಸನ್ನಾವರಿಸಿತ್ತು. ಒಂದು ಉಪಾಯ ಹೊಳೆಯಿತಾದರೂ ಹೆಣ್ಣು ಮನಸ್ಸಿಗೆ ಆ ಬಗ್ಗೆ ಅಸಮಾಧಾನ. ತನ್ನ ಸ್ವಾರ್ಥ ಮೇಲೋ ಅಥವಾ ಪತಿಯ ದೌತ್ಯ ಮೇಲೋ ಎಂಬ ಕೋಲಾಹಲ ಮನದಲ್ಲಿ. ಕೊನೆಗೆ ಸ್ವಾರ್ಥ ಸೋತುಬಿಟ್ಟಿತು! ತನ್ನ ಪತಿಗೆ ಸೃಷ್ಟಿಕರ್ತನು ನೀಡಿದ ಹೊಣೆಗಾರಿಕೆಯೇ ಮೇಲು ಮತ್ತು ಅದನ್ನು ನಿಭಾಯಿಸಲು ತಾನು ಸಹಕರಿಸಲೇಬೇಕು ಎಂಬ್ಬ ತೀರ್ಮಾನಕ್ಕೆ ಬಂದರು. ಸೇವಕಿ ಹಾಜಿರಾಳನ್ನು ವಿವಾಹಮಾಡಿಕೊಳ್ಳಿ , ಅವಳಿಂದ ಸಂತಾನ ಪ್ರಾಪ್ತಿಯಾಗಬಹುದು ಎಂದು ಪತಿಯ ಮನವೊಲಿಸಿದರು. ಹಾಜಿರಾರೊಂದಿಗೆ ಇಬ್ರಾಹೀಮ್(ಅ)ರ ವಿವಾಹವಾಯಿತು. ಮುಂದೆ ಹಾಜಿರಾ ಗರ್ಭ ಧರಿಸಿದರು. ಸೃಷ್ಟಿಕರ್ತನು ಹೀಗೆಂದನು.

فَبَشَّرْنَاهُ بِغُلَامٍ حَلِيمٍ

ಹಾಗಾಗಿ (ಪ್ರಾರ್ಥನೆಯ ಉತ್ತರವಾಗಿ) ಅವರಿಗೆ ಒಬ್ಬ ಸಹನಶೀಲ ಪುತ್ರನ ಸುವಾರ್ತೆ ನೀಡಿದೆವು.

(ಕುರ್‌ಆನ್–37:101)

ತರುವಾಯ ಇಬ್ರಾಹೀಮ್(ಅ)ರ ಮನೆಯಲ್ಲಿ ಅವರ ಮೊಟ್ಟ ಮೊದಲ ಸಂತತಿಯ ಜನನವಾಯಿತು. ಆ ಗಂಡು ಮಗುವಿಗೆ ಇಸ್ಮಾಈಲ್(ಅ) ಎಂದು ನಾಮಕರಣ ಮಾಡಲಾಯಿತು. ಬೈಬಲಿನಲ್ಲಿಯೂ ಇಬ್ರಾಹೀಮ್(ಅ)ರ ಮೊದಲ ಸಂತತಿಗೆ ಇದೇ ಹೆಸರಿದೆ ಮತ್ತು ಅವರಿಗೆ ಆಗ ಎಂಭತ್ತಾರು ವರ್ಷ ವಯಸ್ಸಾಗಿತ್ತು ಎಂದು ಹೇಳಲಾಗಿದೆ–

"ತರುವಾಯ ಹಾಗರಳು ಅಬ್ರಾಮನಿಗೆ ಮಗನನ್ನು ಹೆತ್ತಳು. ಹಾಗರಳು ಅಬ್ರಾಮನಿಗೆ ಹೆತ್ತಮಗನಿಗೆ ಅವನು ಇಷ್ಮಾಯೇಲ ಎಂದು ಹೆಸರಿಟ್ಟನು. ಹಾಗರಳು ಅಬ್ರಾಮನಿಗೆ ಇಷ್ಮಾಯೇಲನನ್ನು ಹೆತ್ತಾಗ ಅಬ್ರಾಮನು ಎಂಭತ್ತಾರು ವರುಷದವನಾಗಿದ್ದನು". (ಬೈಬಲ್ – ಆದಿಕಾಂಡ –16:15,16)

❑

## ಪರೀಕ್ಷೆಗಳನ್ನೆದುರಿಸುವ ಸನ್ನಾಹ

ಇಬ್ರಾಹೀಮ್(ಅ)ರು ತಮ್ಮ ತಾಯ್ನೆಲವನ್ನು ತೊರೆಯುವುದಕ್ಕಿಂತ ಮುಂಚೆಯೇ ಅವರು ಅಲ್ಲಿ ಅನೇಕಾರು ಪರೀಕ್ಷೆಗಳನ್ನು ಎದುರಿಸಿಯಾಗಿತ್ತು. ಆ ದೇಶವನ್ನು ಬಿಟ್ಟು ಹೋದ ನಂತರ ಪರೀಕ್ಷೆಗಳಿಗೊಂದು ಅಲ್ಪವಿರಾಮ ಬಿದ್ದಿತ್ತು. ಇಸ್ಮಾಈಲ್(ಅ)ರ ಜನನದ ನಂತರ ಪರೀಕ್ಷೆಗಳ ಸುರಿಮಳೆಯು ಮತ್ತೊಮ್ಮೆ ಪ್ರಾರಂಭವಾಯಿತು. ಭೂಮಿಯಲ್ಲಿ ಅತ್ಯಧಿಕವಾಗಿ ಪರೀಕ್ಷಿಸಲ್ಪಟ್ಟವರು ಅಲ್ಲಾಹನ ಪ್ರವಾದಿಗಳು ಎಂದು ಪ್ರವಾದಿ ಮುಹಮ್ಮದ್(ಸ) ಒಮ್ಮೆ ಹೇಳಿದ್ದುಂಟು. ಯಾರದೇ ಸ್ಥಾನಮಾನವು ಅದೆಷ್ಟು ಉನ್ನತವಾಗಿರುತ್ತದೋ ಅವರಿಗೆ ಅಷ್ಟೇ ಪರೀಕ್ಷೆಗಳನ್ನು ಎದುರಿಸಬೇಕಾಗುತ್ತದೆ. ಇಬ್ರಾಹೀಮ್(ಅ)ರು ಸರ್ವರೀತಿಯ ಪರೀಕ್ಷೆಗಳನ್ನು ಎದುರಿಸಲು ಸದಾ ಸಿದ್ಧರು. ಅಲ್ಲಾಹನು ಹೇಳುತ್ತಾನೆ,

وَإِذِ ابْتَلَىٰ إِبْرَاهِيمَ رَبُّهُ بِكَلِمَاتٍ فَأَتَمَّهُنَّ

ಇಬ್ರಾಹೀಮರನ್ನು ಅವರ ಪ್ರಭು ಕೆಲವು ವಿಷಯಗಳಲ್ಲಿ ಪರೀಕ್ಷಿಸಿದ ಸಂದರ್ಭವನ್ನು ಸ್ಮರಿಸಿರಿ. ಅವರು ಅವುಗಳಲ್ಲೆಲ್ಲಾ ಸಫಲರಾದರು.

(ಕುರ್‌ಆನ್-2:124)

ತನ್ನ ಹಸುಗೂಸಾದ ಇಸ್ಮಾಈಲ್(ಅ) ಮತ್ತು ಪ್ರಿಯಪತ್ನಿ ಹಾಜಿರಾ(ಅ)ರನ್ನು ದೂರದ ಮರುಭೂಮಿಯಲ್ಲಿ ಬಿಟ್ಟು ಬರುವಂತೆ ಇಬ್ರಾಹೀಮ್(ಅ)ರಿಗೆ ಅಲ್ಲಾಹನು ಆಜ್ಞಾಪಿಸುತ್ತಾನೆ. ತಕ್ಷಣವೇ ಆಜ್ಞಾಪಾಲನೆಯಾಗುತ್ತದೆ. ಈ ಒಟ್ಟು ಘಟನೆಯ ಕುರಿತಂತೆ ಸಹೀಹುಲ್ ಬುಖಾರಿಯಲ್ಲಿ ಅಬ್ದುಲ್ಲಾ ಬಿನ್ ಅಬ್ಬಾಸ್ (ರ) ವರದಿ ಮಾಡಿರುವ ಒಂದು ಸುದೀರ್ಘವಾದ ಹದೀಸ್ ಲಭ್ಯವಿದೆ. ಅದರ ಸಾರಾಂಶ ಹೀಗಿದೆ-

ಪ್ರವಾದಿ ಇಬ್ರಾಹೀಮ್(ಅ)ರು ತನ್ನ ಪತ್ನಿ ಹಾಜಿರಾ(ಅ) ಮತ್ತು ಹಸುಗೂಸು ಇಸ್ಮಾಈಲ್(ಅ)ರನ್ನು ಮಕ್ಕಾ ಎಂಬ ಮರುಭೂಮಿಯಲ್ಲಿ ಬಿಟ್ಟು ಬರಲು ಹೋದರು. ಹಾಜಿರಾ(ಅ)ರಿಗೆ ತನ್ನ ಪತಿ ತನ್ನನ್ನು ಹೀಗೆ ಬಿಟ್ಟು ಬರುವವರಿದ್ದಾರೆ ಎಂದು ತಿಳಿದಿತ್ತು. ಆದರೆ ದೂರ ದೂರಕ್ಕೂ ಯಾವುದೇ ತರಹದ ಜೀವಿಯ ಎಳ್ಳಷ್ಟು ಕುರುಹು ಕೂಡ ಗೋಚರಿಸದ, ಒಣಗಿ ಕಂಗೆಟ್ಟ ಬಂಜರು ಭೂಮಿ ಅದಾಗಿರಬಹುದು ಎಂದು ಅವರು ನಿರೀಕ್ಷಿಸಲೇ ಇಲ್ಲ. ಸಹಜವಾಗಿಯೇ ಪತಿಯನ್ನು ಪ್ರಶ್ನಿಸಿದರು-

"ಇಬ್ರಾಹೀಮ್, ನಮ್ಮನ್ನು ಇಂತಹ ಮರುಭೂಮಿಯಲ್ಲಿ ತಾವು ಬಿಟ್ಟು ಹೋಗುವವರಿದ್ದೀರಾ?" ಉತ್ತರ ಬರಲೇ ಇಲ್ಲ. ಮೂರು ಸಲ ಅದೇ ಪ್ರಶ್ನೆಯನ್ನು ಕೇಳಿದರು. ಉತ್ತರವಿಲ್ಲ. "ಅಲ್ಲಾಹನು ಹೀಗೆ ಮಾಡುವಂತೆ ಆಜ್ಞಾಪಿಸಿದ್ದಾನೆಯೇ?" ಮರು ಪ್ರಶ್ನೆ ಹಾಕಿದರು.

"ಹೌದು" ಎಂಬ ಉತ್ತರ ಬಂತು.

ಸತ್ಯವಿಶ್ವಾಸಿಯಾದ ಆ ಮಹಾನ್ಮಹಿಳೆಯ ಬಾಯಿಯಿಂದ ಕೆಚ್ಚೆದೆಯ, ಬುದ್ಧಿವಂತ, ನೇರ ಮತ್ತು ದಿಟ್ಟ ಮಾತು ಹೊರಟಿತು

"ಹಾಗಾದರೆ ಅಲ್ಲಾಹನು ನಮ್ಮ ಆರೈಕೆ ಮಾಡುವನು ಮತ್ತು ಅವನೇ ನಮ್ಮನ್ನು ರಕ್ಷಿಸುವನು. ತಾವು ನಿಶ್ಚಿಂತರಾಗಿ ಹೋಗಿ".

ತಾಯಿ ತನ್ನ ನವಜಾತ ಶಿಶುವಿನೊಂದಿಗೆ ಒಂದಿಷ್ಟು ಖರ್ಜೂರ ಮತ್ತು ಒಂದು ಚರ್ಮದ ಚೀಲ ತುಂಬಾ ನೀರಿನೊಂದಿಗೆ ಅಲ್ಲಿ ಬೀಡುಬಿಟ್ಟರು. ಇಬ್ರಾಹೀಮ್(ಅ) ಹಿಂತಿರುಗಿ ಹೋಗುವಾಗ ದೂರದಿಂದ ಪತ್ನಿ ಮತ್ತು ಮಗು ಕಾಣುತ್ತಾರೋ ಎಂದು ನೋಡಲು ಪ್ರಯತ್ನಿಸುತ್ತಾರೆ. ಕಾಣದಾದಾಗ

ಅಲ್ಲಾಹನ ಭವನದೆಡೆಗೆ (ನಂತರ ಅವರು ನಿರ್ಮಿಸಲಿರುವ ಕಅಬಾ ಭವನದ ಜಾಗ) ಮುಖ ಮಾಡುತ್ತಾರೆ. ತನ್ನ ಪ್ರಭುವನ್ನು ಕೂಗಿ ಕರೆಯುತ್ತಾರೆ,

رَبَّنَا إِنِّي أَسْكَنْتُ مِنْ ذُرِّيَّتِي بِوَادٍ غَيْرِ ذِي زَرْعٍ عِنْدَ بَيْتِكَ الْمُحَرَّمِ رَبَّنَا لِيُقِيمُوا الصَّلَاةَ فَاجْعَلْ أَفْئِدَةً مِنَ النَّاسِ تَهْوِي إِلَيْهِمْ وَارْزُقْهُمْ مِنَ الثَّمَرَاتِ لَعَلَّهُمْ يَشْكُرُونَ

**ಓ ನನ್ನ ಪ್ರಭೂ, ನಾನು ನನ್ನ ಸಂತತಿಯ ಒಂದು ಭಾಗವನ್ನು ಒಂದು ಬಂಜರು ಕಣಿವೆಯಲ್ಲಿ ನಿನ್ನ ಸನ್ಮಾನ್ಯಗೃಹದ ಬಳಿ ತಂದುನೆಲೆಗೊಳಿಸಿದ್ದೇನೆ. ಓ ನನ್ನ ಪ್ರಭೂ, ಇವರು ನಮಾಝನ್ನು ಸಂಸ್ಥಾಪಿಸಲೆಂದು ಹೀಗೆ ಮಾಡಿದ್ದೇನೆ. ಆದುದರಿಂದ ನೀನು ಜನಮನಗಳು ಇವರ ಕಡೆಗೆ ಒಲಿಯುವಂತೆ ಮಾಡು ಮತ್ತು ಇವರಿಗೆ ತಿನ್ನಲು ಫಲಗಳನ್ನು ನೀಡು. ಇವರು ಕೃತಜ್ಞರಾಗಲೂಬಹುದು.**

**(ಕುರ್‌ಆನ್-14:37)**

ತಾಯಿ ಮತ್ತು ಮಗುವಿನ ಬಳಿ ಇದ್ದ ಆಹಾರ ಪಾನೀಯ ಮುಗಿಯುತ್ತಾ ಬಂತು. ತಾಯಿಗೆ ಆತಂಕ ಪ್ರಾರಂಭವಾಯಿತು. ಒಂದೊಮ್ಮೆ ಅದು ಸಂಪೂರ್ಣವಾಗಿ ಮುಗಿದು ಹೋಯಿತು. ಶಿಶು ಹಸಿವು ಮತ್ತು ಬಾಯಾರಿಕೆ ತಾಳಲಾರದೆ ಒಂದೇ ಸಮನೆ ಅಳುತ್ತಿತ್ತು. ತಾಯಿಯ ಹೃದಯ ಒದ್ದಾಡಿತು. ಅಲ್ಲಿ ಎರಡು ಬೆಟ್ಟಗಳು ಗೋಚರಿಸಿದವು. ಬೆಟ್ಟಗಳ ಮೇಲೆ ನಿಂತರೆ ನೀರಿನ ಸ್ಥಳವೇನಾದರೂ ಕಾಣಬಹುದೋ ಅಥವಾ ಜನಜೀವನ ಗೋಚರಿಸಬಹುದೋ ಎಂಬ ನಿರೀಕ್ಷೆಯೊಂದಿಗೆ ಏಳು ಸಲ ಎರಡು ಬೆಟ್ಟಗಳಾದ 'ಸಫಾ' ಮತ್ತು 'ಮರ್ವಾ'ಕ್ಕೆ ಏರಿಳಿದು ಅವುಗಳ ನಡುವೆ ಹಾಜಿರ ವೇಗವಾಗಿ ನಡೆದರು. ಮಗು ತನ್ನೆರಡು ಕಾಲುಗಳನ್ನು ನೆಲಕ್ಕಪ್ಪಳಿಸುತ್ತಾ ಅಳುತ್ತಿತ್ತು. ತಟ್ಟನೆ ಹಾಜಿರಾರಿಗೆ ಯಾರದೋ ಶಬ್ದ ಕೇಳಿದಂತಾಯಿತು. ಮಗುವಿನ ಕಡೆ ನೋಡಿದಾಗ ಅಲ್ಲೊಬ್ಬರು ನಿಂತಿರುವಂತೆ ಭಾಸವಾಯಿತು, (ಅದು ಜಿಬ್ರೀಲ್(ಅ) ಆಗಿದ್ದರು ಎಂದು ಹದೀಸ್ ಹೇಳುತ್ತದೆ). ಅವರು ತನ್ನ ಕಾಲಿನ ಹಿಮ್ಮಡಿಯಿಂದ ಮಗು ಕಾಲನ್ನಪ್ಪಳಿಸುತ್ತಿದ್ದ ಸ್ಥಳದಲ್ಲಿ ನೆಲ ಅಗೆಯುತ್ತಿರುವಂತೆ ಕಂಡಿತು. ತಟ್ಟನೆ ಚಿಲುಮೆಯೊಂದು ಪುಟಿಯಿತು. ನೀರು ಚಿಮ್ಮುತ್ತಾ ಮೇಲೇರಿತು. ಧಾರಾಕಾರವಾಗಿ ನೀರು ಹರಿಯಿತು. ತಾಯಿ ಸಂತೋಷಾತಿರೇಕದಿಂದ ಮಗುವಿನ ಬಳಿ ಧಾವಿಸಿ ಅದಕ್ಕೆ ನೀರುಣಿಸಿ ತಾನೂ ದಾಹ ತಣಿಸಿಕೊಂಡರು. ಮಗುವಿಗೆ ಹಾಲುಣಿಸಿದರು. ಆ ಚಿಲುಮೆಗೊಂದು ಚಿಕ್ಕ ತಡೆಗೋಡೆ ಮಾಡಿದರು.ತರುವಾಯ ಆ ದೇವಚರ ಹಾಜಿರಾರೊಂದಿಗೆ ಹೀಗೆಂದಿತು." "ವ್ಯರ್ಥವಾಗಿ ಬಿಡುವೆ ಎಂಬ ಭಯವನ್ನು ಬಿಟ್ಟುಬಿಡು. ಇಲ್ಲಿ ಅಲ್ಲಾಹನ ಭವನವಿದೆ, ಇದನ್ನು ಈ

ಮಗು ಮತ್ತವನ ತಂದೆ ಸೇರಿ ನಿರ್ಮಿಸುವರು. ಅಲ್ಲಾಹನು ಈ ಭವನದ ಜನರನ್ನು ನಿರ್ಲಕ್ಷಿಸಲಾರನು." (ಸಹೀಹ್ ಬುಖಾರಿ – ಕಿತಾಬುಲ್ ಅಂಬಿಯಾ.)

ಬೈಬಲಿನಲ್ಲಿಯೂ ಈ ಘಟನೆಯನ್ನು ಒಂದಿಷ್ಟು ವ್ಯತ್ಯಾಸಗಳೊಂದಿಗೆ ಉಲ್ಲೇಖಿಸಲಾಗಿದೆ.(ಆದಿಕಾಂಡ – 21:14–19)

ಹೀಗೆ, ನಿರ್ಜೀವವಾಗಿದ್ದ ಆ ಮಕ್ಕಾ ಎಂಬ ಬಂಜರು ಭೂಮಿ ಸಜೀವವಾಗಿ ಕಂಗೊಳಿಸತೊಡಗಿತು. ಅನೇಕ ಯಾತ್ರಾತಂಡಗಳು, ವ್ಯಾಪಾರಿಗಳ ಕಾರವಾರಿಗಳು, ಅಲೆಮಾರಿ ಗುಂಪುಗಳು ಅನೇಕ ವರ್ಷಗಳಿಂದ ಯಾತ್ರೆ ಕೈಗೊಳ್ಳುವಾಗ ಮಕ್ಕಾದ ಹೊರವಲಯದಿಂದಲೇ ಹಾದು ಹೋಗುತ್ತಿದ್ದರು. ಯಾರೂ ಇತ್ತ ತಲೆಯೆತ್ತಿ ನೋಡುವ ಗೋಜಿಗೇ ಹೋಗುತ್ತಿರಲಿಲ್ಲ. ಈ ಘಟನೆಯಾದ ಮೇಲೆ ಕೂಡ 'ಜುರ್ಹುಮ್' ಗೋತ್ರದ ಯಾತ್ರಾತಂಡವೊಂದು ಅಲ್ಲಿಂದ ಹಾದು ಹೋಗುತ್ತಿತ್ತು. ಅವರಲ್ಲಿ ಒಬ್ಬರು ಆ ಕಡೆ ನೋಡಿದಾಗ ಅಲ್ಲಿ ದೂರದಲ್ಲೊಂದು ಪಕ್ಷಿ ಹಾರಾಡುವುದು ಕಂಡಿತು. ಅದು ನೀರಿದ್ದಲ್ಲಿ ಮಾತ್ರ ಹಾರಾಡುವ ಪಕ್ಷಿ ಎಂದು ಅವನಿಗೆ ಗೊತ್ತಿತ್ತು. ಅವನು ತನ್ನ ಸಹಯಾತ್ರಿಗಳಿಗೆ ಅದನ್ನು ತೋರಿಸಿದ. ಅಲ್ಲಿ ನೀರಿನ ಯಾವುದೇ ಮೂಲ ಇಲ್ಲವೆಂದು ಅವರಿಗೆ ತಿಳಿದಿತ್ತಾದರೂ ಇದ್ಯಾವ ಸೋಜಿಗವೆಂಬ ಕುತೂಹಲದಿಂದಾಗಿ ಅವರಲ್ಲಿ ಇಬ್ಬರನ್ನು ಆ ಕಡೆ ನೋಡಿಬರಲು ಕಳುಹಿಸಲಾಯಿತು. ಅಲ್ಲಿ ಅವರು ನೀರು ಕಂಡು ಸಂತೋಷಾಶ್ಚರ್ಯದಿಂದ ಎಲ್ಲರನ್ನೂ ಕರೆದರು. ನೀರಿನ ಬಳಿ ಒಬ್ಬ ಮಹಿಳೆ ಮತ್ತು ಹಸುಗೂಸನ್ನು ಕಂಡರು. ಅವರು "ನಾವಿಲ್ಲಿ ನೆಲೆಸಬಹುದೇ?" ಎಂದು ಹಾಜಿರಾರೊಡನೆ ಕೇಳಿದರು. "ಇರಬಹುದು, ಆದರೆ ನೀರಿನ ಒಡೆತನ ನನ್ನಲ್ಲಿ ಮಾತ್ರ ಇರುವುದು" ಎಂದು ಹೇಳಿದರು. ಜುರ್ಹುಮ್ ಗೋತ್ರದವರು ಒಪ್ಪಿದರು. ಹಾಜಿರಾ(ಅ)ರ ಸಂತೋಷಕ್ಕೆ ಎಣೆ ಇರಲಿಲ್ಲ, ಯಾಕೆಂದರೆ ಅವರಿಗೆ ಜನರ ಮಧ್ಯೆ ಇರುವುದೇ ಖುಷಿ. ಜನಸಂಪರ್ಕವಿಲ್ಲದೆ ಬೇಸತ್ತು ಹೋಗಿದ್ದರು. ಆ ಗೋತ್ರದವರು ತರುವಾಯ ತಮ್ಮ ಕುಟುಂಬಗಳನ್ನೂ ಕರೆಸಿಕೊಂಡು ಅಲ್ಲೇ ವಾಸಿಸತೊಡಗಿದರು.

ಒಂದು ಹೊಸ ನಾಗರಿಕತೆ ಆ ಮರುಭೂಮಿಯಲ್ಲಿ ಚಿಗುರೊಡೆಯಿತು. ಎಲ್ಲೆಲ್ಲೂ ಹೊಸತನ. ಸರ್ವೆಡೆಯೂ ಆನಂದದ ವಾತಾವರಣ. ಬಾಲಕ ಇಸ್ಮಾಈಲ್(ಅ) ಅವರ ಒಡನಾಟದಲ್ಲಿ ಬೆಳೆಯತೊಡಗಿದರು. ಅವರಿಂದ ಅರಬಿ ಭಾಷೆ ಕಲಿತರು. ತಮ್ಮ ಸಚ್ಚಾರಿತ್ರ್ಯದಿಂದಾಗಿ ಎಲ್ಲರಿಗೂ ಪ್ರಿಯರಾದರು.

ಈ ಮಧ್ಯೆ ಇಬ್ರಾಹೀಮ್(ಅ)ರು ತಾವು ಮರುಭೂಮಿಯಲ್ಲಿ ಬಿಟ್ಟು ಹೋದ ತಮ್ಮ ಪತ್ನಿ ಮತ್ತು ಮಗನನ್ನು ನೋಡಿಕೊಂಡು ಹೋಗಲು ಬಂದು

ಅವರಿಬ್ಬರೂ ಜೀವಂತವಿರುವುದನ್ನೂ ಆ ಮಕ್ಕಾ ಎಂಬ ಬಂಜರು ಭೂಮಿ ಜೀವಂತವಾಗಿ ರಾರಾಜಿಸುವುದನ್ನು ಕಂಡು ಬಹಳ ಸಂತೋಷಪಟ್ಟರು. ಸೃಷ್ಟಿಕರ್ತನನ್ನು ಸ್ತುತಿಸಿದರು.

ಇಬ್ರಾಹೀಮ್(ಅ) ಸಮಾಜ ಸುಧಾರಣೆಯ ಮಹತ್ಕಾರ್ಯವನ್ನು ಯಾವ ದೃಢಚಿತ್ತತೆಯೊಂದಿಗೆ ನಿಭಾಯಿಸುತ್ತಿದರೋ ಅಷ್ಟೇ ಮಹತ್ವವನ್ನು ಅವರು ತಮ್ಮ ಮನೆಮಂದಿಯ ಸುಧಾರಣೆಗೂ ನೀಡಲು ಮರೆಯಲಿಲ್ಲ. ಹಾಗಾಗಿ ಅವರು ಇಸ್ಮಾಈಲ್(ಅ) ಮತ್ತು ಹಾಜಿರಾ(ಅ)ರನ್ನು ನೋಡಿಕೊಂಡು ಹೋಗಲು ಆಗಿಂದಾಗ ಮಕ್ಕಾದ ಕಡೆ ಬಂದು ಹೋಗುತ್ತಿದ್ದರು.

## ಮಹಾಪರೀಕ್ಷೆಯ ಸುಳಿಯಲ್ಲಿ

ಇಸ್ಮಾಈಲ್(ಅ)ರಿಗೆ ಆಗ ಸುಮಾರು ಹದಿಮೂರು – ಹದಿನಾಲ್ಕು ವರ್ಷ ವಯಸ್ಸು. ತಮ್ಮ ತಂದೆಯೊಂದಿಗೆ ಹೆಜ್ಜೆಗೆ ಹೆಜ್ಜೆ ಇಟ್ಟು ನಡೆಯುತ್ತಾ, ಅವರ ಕೆಲಸ ಕಾರ್ಯಗಳಲ್ಲಿ ನೆರವಾಗುತ್ತಾ ಸಂತೋಷಪಡುತ್ತಿದ್ದ ವಯಸ್ಸು. ಆಗ ಅವರ ವಯಸ್ಸು ಎಷ್ಟಾಗಿತ್ತು ಎಂಬುದರ ಕುರಿತು ಪವಿತ್ರ ಕುರ್‌ಆನ್ ಹೀಗೆನ್ನುತ್ತದೆ,

فَلَمَّا بَلَغَ مَعَهُ السَّعْيَ

ಆ ಬಾಲಕನು ಅವರ ಜೊತೆ ದುಡಿಯುವ ಪ್ರಾಯಕ್ಕೆ ತಲಪಿದಾಗ

(ಕುರ್‌ಆನ್– 37:102).

ಒಟ್ಟಿನಲ್ಲಿ ತಂದೆಯ ಪ್ರೀತಿಗೆ ಪಾತ್ರರಾಗಲು ಅವರ ಜವಾಬ್ದಾರಿಕೆಗಳನ್ನು ಹಂಚುವ ಕನಸು ಹೊತ್ತು ನಡೆಯುವ ಹುರುಪಿನ ಹದಿಹರೆಯ. ಸದೃಢವಾಗಿ ಬೆಳೆಯುತ್ತಿರುವ ತಮ್ಮ ಸಚ್ಚಾರಿತ್ರ್ಯವಂತ ಮಗನನ್ನು ನೋಡುವಾಗಲೆಲ್ಲ ಇಬ್ರಾಹೀಮ್(ಅ) ಹರ್ಷಿಸುತ್ತಿದ್ದರು. ದೇವನನ್ನು ಕೊಂಡಾಡುತ್ತಿದ್ದರು. ಆ ಹೊತ್ತಿನಲ್ಲಿ ಸೃಷ್ಟಿಕರ್ತನು ಅವರನ್ನು ಇನ್ನೂ ಪರೀಕ್ಷಿಸ ಬಯಸಿದ. ಅವರಿಗೊಂದು ಕನಸುಬಿತ್ತು. ಕನಸಿನಲ್ಲಿ ಸೃಷ್ಟಿಕರ್ತನು ಅವರಲ್ಲಿ ತಮ್ಮ ಏಕೈಕ ಪುತ್ರನಾದ ಇಸ್ಮಾಈಲ್(ಅ)ರನ್ನು ಬಲಿಕೊಡಬೇಕು ಎಂದು ಆಜ್ಞಾಪಿಸಿದ. ಸ್ನೇಹಮಯಿ ತಂದೆಗೆ ಒಮ್ಮೆಲೇ ಸಿಡಿಲು ಬಡಿದಂತಾಯಿತು. ಆದರೆ ದೇವನ ಆ ಆಜ್ಞಾಪಾಲಕ ದಾಸನು ತಕ್ಷಣವೇ ತಮ್ಮನ್ನು ತಾವು ಸುಧಾರಿಸಿಕೊಂಡರು. ದೇವಾನುಸರಣೆ ಮತ್ತು ಪುತ್ರಪ್ರೇಮದ ಮಧ್ಯೆ ಸೆಣಸಾಡುತ್ತಿದ್ದ ಮನಸ್ಸನ್ನು ಹತೋಟಿಗೆ ತಂದರು. ಶಾಂತಚಿತ್ತರಾದರು. ದೇವಾನುಸರಣೆಯ ಭಾವವೇ ಮೇಲುಗೈ ಸಾಧಿಸಿತು. ದೇವಾಜ್ಞೆ ಪಾಲನೆಗೆ ಮುಂದಾದರು. ಪವಿತ್ರ ಕುರ್‌ಆನ್

ಆ ಘಟನೆಯನ್ನು ಸೂರಃ 'ಅಸ್ಸಾಫ್ಫಾತ್'ನ 102 ರಿಂದ 108ವರೆಗಿನ ಸೂಕ್ತಗಳಲ್ಲಿ ಈ ರೀತಿ ನಮ್ಮ ಮುಂದಿಡುತ್ತದೆ.

فَلَمَّا بَلَغَ مَعَهُ السَّعْيَ قَالَ يَا بُنَيَّ إِنِّي أَرَىٰ فِي الْمَنَامِ أَنِّي أَذْبَحُكَ

ಆ ಬಾಲಕನು ಅವರ ಜೊತೆ ದುಡಿಯುವ ಪ್ರಾಯಕ್ಕೆ ತಲಪಿದಾಗ (ಒಂದು ದಿನ) ಇಬ್ರಾಹೀಮರು ಅವನೊಡನೆ, "ಮಗೂ, ನಾನು (ಬಲಿಯರ್ಪಿಸಲಿಕ್ಕಾಗಿ) ನಿನ್ನ ಕೊರಳು ಕೊಯ್ಯುತ್ತಿರುವುದನ್ನು ಕನಸಿನಲ್ಲಿ ಕಂಡೆನು, ಎಂದರು.

ಮಗನ ದೇವಭಕ್ತಿ, ಸ್ಥಿರಚಿತ್ತತೆ ಮತ್ತು ತ್ಯಾಗ ಮನೋಭಾವದ ಬಗ್ಗೆ ಕಿಂಚಿತ್ಸಂಶಯವಿಲ್ಲದಿರುವ ಕಾರಣದಿಂದಲೇ ತಂದೆಗೆ ಆ ಹದಿಹರೆಯದ ತರುಣನಲ್ಲಿ ಇಷ್ಟೊಂದು ಗಂಭೀರ ವಿಷಯವನ್ನು ಧೈರ್ಯವಾಗಿ ಹೇಳಲು ಸಾಧ್ಯವಾಯಿತು. ಆದರೂ ಮಗನ ಮನದಿಂಗಿತವೇನು? ಅವನ ಪ್ರತಿಕ್ರಿಯೆ ಹೇಗಿರಬಹುದು? ಅವನ ಮುಖದಲ್ಲಿ ಭಯ ಗೋಚರಿಸಬಹುದೋ ಎಂಬುದನ್ನು ತಿಳಿಯಲು ಅವರು ಹಿಂಜರಿಯಲಿಲ್ಲ. ತನ್ನ ಅಭಿಪ್ರಾಯವನ್ನು ಮಗನ ಮೇಲೆ ಹೇರದೆ ಅವನ ಇಚ್ಛೆಯನ್ನು ತಿಳಿಯುವ ವಿಶಾಲ ಹೃದಯವೂ ಆ ತಂದೆಯಲ್ಲಿತ್ತು. ಹಾಗಾಗಿ ಅವರು ಹೀಗೆ ಕೇಳಿದರು.

فَانْظُرْ مَاذَا تَرَىٰ

"ಈಗ ನಿನ್ನ ಅಭಿಪ್ರಾಯವೇನೆಂದು ಹೇಳು"

ಮಗನಾದರೋ ತಂದೆಗೆ ತಕ್ಕವರು. ದೇವಾಜ್ಞೆಯ ಅನುಸರಣೆಗೆ ಯೋಚಿಸುವುದೇನಿದೆ ಎಂಬ ಅಚಲ ವಿಶ್ವಾಸದವರು. ಒಂದು ನಿಮಿಷವೂ ಯೋಚಿಸದೆ ತಕ್ಷಣ ಬಂತು ಇಸ್ಮಾಈಲ್(ಅ)ರ ಉತ್ತರ,

قَالَ يَا أَبَتِ افْعَلْ مَا تُؤْمَرُ

ಆಗ ಅವನು, "ಅಪ್ಪಾ, ತಮಗೆ ಆಜ್ಞಾಪಿಸಲಾಗಿರುವುದನ್ನು ಮಾಡಿಬಿಡಿರಿ ಎಂದನು" (ತಂದೆಯನ್ನು ಮಗನೇ ಸಮಾಧಾನಿಸಿದರು,)

سَتَجِدُنِي إِنْ شَاءَ اللَّهُ مِنَ الصَّابِرِينَ

"ಅಲ್ಲಾಹನಿಚ್ಛಿಸಿದರೆ ತಾವು ನನ್ನನ್ನು ಸಹನೆಯುಳ್ಳವನಾಗಿ ಕಾಣುವಿರಿ" ಎಂದನು.

ಮನಸ್ಸು ಶಾಂತತೆಯ ಪರಾಕಾಷ್ಠೆಯಲ್ಲಿತ್ತು. ಅಚಲ ದೇವಪ್ರೇಮದ

ಉತ್ತುಂಗವಾಗಿತ್ತು ಆ ಸಂದರ್ಭ. ಸೃಷ್ಟಿಕರ್ತನ ಅತ್ಯಂತ ಪ್ರೀಯರಾದ ಇಬ್ಬರು ದಾಸರು ಆತನ ಸಂಪ್ರೀತಿಗಾಗಿ ತಮ್ಮನ್ನು ಸಂಪೂರ್ಣವಾಗಿ ಸಮರ್ಪಿಸಿದ ಅಪೂರ್ವ ಕ್ಷಣ.

لَمَّا أَسْلَمَا وَتَلَّهُ لِلْجَبِينِ

"ಇಬ್ಬರೂ ವಿಧೇಯತೆಯೊಂದಿಗೆ ಶಿರಬಾಗಿದರು ಮತ್ತು ಇಬ್ರಾಹೀಮರು ಮಗನನ್ನು ಅಧೋಮುಖಿಯಾಗಿ ಮಲಗಿಸಿದರು."

ದಾಸರು ಪರೀಕ್ಷೆಯಲ್ಲಿ ಸಫಲರಾದರು. ತಕ್ಷಣವೇ ಕೇಳಿ ಬಂತು ಸೃಷ್ಟಿಕರ್ತನ ಅತಿ ಪ್ರೀತಿಯ ಕರೆ,

وَنَادَيْنَاهُ أَنْ يَا إِبْرَاهِيمُ

ಆಗ ನಾವು ಹೀಗೆ ಕೂಗಿ ಹೇಳಿದೆವು "ಓ ಇಬ್ರಾಹೀಮ್"

ನೀನು ಈ ಕಾರ್ಯವನ್ನು ನಿಲ್ಲಿಸು, ನೀನು ಪರೀಕ್ಷೆಯಲ್ಲಿ ಉತ್ತೀರ್ಣನು ಎಂದು ತಿಳಿಸಲಾಗಿತ್ತು ಆ ಕರೆ. ಸರ್ವಲೋಕಗಳ ಪ್ರಭು ಆಗ ಹೀಗೆಂದನು,

قَدْ صَدَّقْتَ الرُّؤْيَا ۚ إِنَّا كَذَٰلِكَ نَجْزِي الْمُحْسِنِينَ

ನೀವು ಸ್ವಪ್ನವನ್ನು ಸತ್ಯಗೊಳಿಸಿ ತೋರಿಸಿದಿರಿ. ನಾವು ಪುಣ್ಯಕಾರ್ಯವೆಸಗುವವರಿಗೆ ಹೀಗೆಯೇ ಸತ್ಫಲ ನೀಡುತ್ತೇವೆ.

ಆ ಪರೀಕ್ಷೆಯ ಶ್ರೇಷ್ಠತೆಯನ್ನು ಕೊಂಡಾಡಿದನು,

إِنَّ هَٰذَا لَهُوَ الْبَلَاءُ الْمُبِينُ

"ನಿಶ್ಚಯವಾಗಿಯೂ ಇದೊಂದು ಪ್ರತ್ಯಕ್ಷ ಪರೀಕ್ಷೆಯಾಗಿತ್ತು."

ಇಸ್ಮಾಈಲ್(ಅ)ರ ಸ್ಥಾನದಲ್ಲಿ ಬಲಿಯರ್ಪಣೆಗೆ ಪರ್ಯಾಯವನ್ನು ಒದಗಿಸಿದನು,

وَفَدَيْنَاهُ بِذِبْحٍ عَظِيمٍ

ನಾವು ಒಂದು ದೊಡ್ಡ ಬಲಿದಾನವನ್ನು ಪರಿಹಾರವಾಗಿ ಕೊಟ್ಟು ಆ ಬಾಲಕನನ್ನು ಬಿಡಿಸಿದೆವು. ಪರಿಹಾರವಾಗಿ ನೀಡಲ್ಪಟ್ಟ ಈ 'ದೊಡ್ಡಬಲಿ' ಒಂದು

ಹೋತವಾಗಿತ್ತು ಎಂದು ಅನೇಕ ಕುರ್‌ಆನ್ ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿದ್ದಾರೆ. (ತಫ್ಸೀರ್ ಇಬ್ನ್ ಕಸೀರ್, ಕುರ್ತುಬಿ, ತಫ್ಹೀಮುಲ್ ಕುರ್‌ಆನ್ , ತದಬ್ಬುರೆ ಕುರ್‌ಆನ್ ಇತ್ಯಾದಿಗಳಲ್ಲಿ ಸೂರಃ ಅಸ್ಸಾಫಾತ್‌ನ ಮೇಲಿನ ಸೂಕ್ತಗಳ ಟಿಪ್ಪಣಿ.)

ಬೈಬಲ್ ಕೂಡಾ ಇದನ್ನೇ ಹೇಳುತ್ತದೆ.

ಜನಿಸಿದಾಗ ಅವರಿಗೆ ಎಂಭತ್ತಾರು ವರ್ಷ ವಯಸ್ಸಾಗಿತ್ತೆಂದೂ ಬೈಬಲ್ ಹೇಳುತ್ತದೆ. (ಆದಿಕಾಂಡ: 16:15.16)

ಈ ಪರಿಹಾರವನ್ನು 'ದೊಡ್ಡಬಲಿ' ಅನ್ನುವುದಕ್ಕೆ ಕಾರಣ ಇದಾಗಿರಬಹುದೆಂದು ಮೌಲಾನಾ ಮೌದೂದಿ ಹೀಗೆ ಅಭಿಪ್ರಾಯಪಟ್ಟಿದ್ದಾರೆ. ಅದನ್ನು ದೊಡ್ಡಬಲಿ ಎಂದಿರುವುದಕ್ಕೆ ಅದು ಇಬ್ರಾಹೀಮರಂತಹ ನಿಷ್ಠಾವಂತ ತಂದೆಯ ಸಹನ ಶೀಲ ಪುತ್ರನ ಬಲಿಯ ಪರಿಹಾರವಾಗಿರುವುದೇ ಕಾರಣ. ಅಲ್ಲಾಹನು ಅದನ್ನು ಅಪೂರ್ವ ಬಲಿದಾನವನ್ನು ಈಡೇರಿಸುವುದಕ್ಕೆ ಕಾರಣವಾಗಿ ಮಾಡಿದನು. ದೊಡ್ಡಬಲಿ ಎನ್ನಲು ಇನ್ನೊಂದು ಕಾರಣವೂ ಇದೆ. ಲೋಕಾದ್ಯಂತ ಇರುವ ವಿಶ್ವಾಸಿಗಳು ಅದೇ ದಿನ ಪ್ರಾಣಿಬಲಿಯರ್ಪಿಸಿ ವಿಧೇಯತೆಯ ಈ ಮಹಾನ್ ಘಟನೆಯನ್ನು ಅಂತ್ಯದಿನದ ವರೆಗೂ ಸ್ಮರಿಸುತ್ತಲಿರಲಿಕ್ಕಾಗಿ ಈ ಸಂಪ್ರದಾಯವನ್ನು ಅಲ್ಲಾಹನು ಜಾರಿಗೊಳಿಸಿರುವನು.

(ತಫ್ಹೀಮುಲ್ ಕುರ್‌ಆನ್-ಸೂರಃ ಸಾಫ್ಫಾತ್ ಟಿಪ್ಪಣಿ.66.)

ಈ ಘಟನೆಯನ್ನು ಅಲ್ಲಾಹನು ಅಂತಿಮ ದಿನದ ವರೆಗೆ ಬರುವ ಎಲ್ಲಾ ಕಾಲದ ಜನರೂ ತಿಳಿಯುವಂತೆ ಮಾಡಿಬಿಟ್ಟನಲ್ಲದೆ ಇಬ್ರಾಹೀಮರಿಗೆ ಅತ್ಯಂತ ಸನ್ಮಾನ್ಯ ಸ್ಥಾನವನ್ನೂ ನೀಡಿದನು.

وَتَرَكْنَا عَلَيْهِ فِي الْآخِرِينَ. سَلَامٌ عَلَىٰ إِبْرَاهِيمَ

ಮತ್ತು ಅವನ (ಪ್ರಶಂಸೆಯನ್ನು) ಶಾಶ್ವತವಾಗಿ ಮುಂದಿನ ತಲೆಮಾರುಗಳಲ್ಲಿ ಉಳಿಸಿಬಿಟ್ಟೆವು. ಇಬ್ರಾಹೀಮರ ಮೇಲೆ ಸಲಾಮ್ (ಶುಭಾಶಯ) ಇದೆ.

## ವಾಸ್ತವದಲ್ಲಿ ಬಲಿಯರ್ಪಿಸಲು ಸಿದ್ಧರಾದವರು ಯಾರು?

ಇಬ್ರಾಹೀಮ್(ಅ)ರ ಇಬ್ಬರು ಪುತ್ರರಾದ ಇಸ್ಮಾಈಲ್(ಅ) ಮತ್ತು ಇಸ್ಹಾಕ್(ಅ)ರ ಪೈಕಿ ಬಲಿ ಅರ್ಪಿಸಲು ಅವರು ಕೊಂಡು ಹೋದದ್ದು ಯಾರನ್ನು ಎಂಬುದು ಬಹಳ ಹಿಂದಿನಿಂದಲೇ ನಡೆದು ಬರುತ್ತಿರುವ ಚರ್ಚೆ. ಯಹೂದಿಗಳು ಮತ್ತು ಕ್ರೈಸ್ತರು ಅದು ಇಸ್ಹಾಕ್ ಆಗಿದ್ದರು ಎಂದು ಪ್ರತಿಪಾದಿಸುತ್ತಾರೆ. ಈ ವಿಷಯವನ್ನು ಸ್ಪಷ್ಟವಾಗಿ ತಿಳಿಯುವುದು ಬಹಳ ಮುಖ್ಯ.

'ಬೈಬಲಿನ ಪ್ರಕಾರ ಅಬ್ರಹಾಮ ತಮ್ಮ ಏಕೈಕ ಪುತ್ರನನ್ನು ಬಲಿ ಕೊಡಲು ಕೊಂಡು ಹೋದರು.' –(ಆದಿಕಾಂಡ: 22:2.)

ಅವರ ಮೊದಲ ಪುತ್ರ ಇಸ್ಮಾಈಲ್(ಅ) ಆಗಿದ್ದರೆಂದೂ, ಇಸ್ಮಾಈಲ್(ಅ) ಜನಿಸಿದಾಗ ಅವರಿಗೆ ಎಂಭತ್ತಾರು ವರ್ಷ ವಯಸ್ಸಾಗಿತ್ತೆಂದೂ ಬೈಬಲ್ ಹೇಳುತ್ತದೆ. (ಆದಿಕಾಂಡ: 16:15.16)

ಇನ್ನು ಇಬ್ರಾಹೀಮರಿಗೆ ತೊಂಬತ್ತೊಂಬತ್ತು ವಯಸ್ಸಾದಾಗ ದೇವನು ಅವರೊಡನೆ ಒಂದು ಒಡಂಬಡಿಕೆ ಮಾಡಿದ್ದನು ಮತ್ತು ಆ ಒಡಂಬಡಿಕೆಯ ಪ್ರಕಾರ ಅವರು ಮತ್ತು ಅವರ ಏಕೈಕ ಮಗನಾದ ಇಸ್ಮಾಈಲ್(ಅ) ಸುನ್ನತಿ ಮಾಡಿಸಿಕೊಳ್ಳಬೇಕೆಂದು ತಾಕೀತು ಮಾಡಿದ್ದನು. ಅವರಲ್ಲದೆ ಅಲ್ಲಿರುವ ಎಲ್ಲಾ ಪುರುಷರಿಗೆ ಮತ್ತು ಇನ್ನು ಮುಂದೆ ಹುಟ್ಟುವ ಗಂಡು ಮಕ್ಕಳಿಗೂ ಸುನ್ನತಿ ಮಾಡಿಸಲೇಬೇಕೆಂದು ದೇವನು ಒಡಂಬಡಿಕೆ ಮಾಡಿದ್ದನು ಎಂಬ ಘಟನೆಯನ್ನು ಬೈಬಲ್ ಉಲ್ಲೇಖಿಸುತ್ತದೆ. –(ಆದಿಕಾಂಡ: 16:15,16.)

ನಂತರ ಇಬ್ರಾಹೀಮರಿಗೆ ನೂರು ವರ್ಷ ವಯಸ್ಸಾದಾಗ ಇಸ್ಹಾಕ್ ಹುಟ್ಟಿದರು ಎಂಬುದು ಕೂಡ ಬೈಬಲಿನ ಹೇಳಿಕೆ. –(ಆದಿಕಾಂಡ – 21:5.)

ಹಾಗಾಗಿ ಇಸ್ಹಾಕ್ ಹುಟ್ಟಿದಾಗ ಇಸ್ಮಾಈಲರಿಗೆ ಆಗಲೇ ಹದಿನಾಲ್ಕು ವರ್ಷ ವಯಸ್ಸಾಗಿತ್ತು, ಹದಿನಾಲ್ಕು ವರ್ಷಗಳು ಅವರು ಇಬ್ರಾಹೀಮರ ಏಕೈಕ ಪುತ್ರರಾಗಿದ್ದರು ಮತ್ತು ಅವರು ಬಲಿ ಕೊಡಲು ಕೊಂಡುಹೋದದ್ದು ಅದೇ ಏಕೈಕ ಪುತ್ರನನ್ನು ಎಂಬ ವಾಸ್ತವಿಕತೆ ಬೈಬಲಿನಿಂದಲೇ ಸ್ಪಷ್ಟವಾಗುತ್ತದೆ. ಆದರೆ ಆ ಉಲ್ಲೇಖ ಬಂದ ಸ್ಥಳದಲ್ಲಿ, (ಈಗಿನ ಬೈಬಲ್ ಆವೃತ್ತಿಗಳಲ್ಲಿ) ಪ್ರೀತಿಯ ಏಕೈಕ ಪುತ್ರ ಎಂಬ ವಾಕ್ಯದ ನಂತರ ಇಸ್ಹಾಕ್ ಎಂಬ ಪದವು ಆವರಣದೊಳಗೆ ಕಾಣಸಿಗುತ್ತದೆ ಎಂಬುದು ಕೂಡ ವಾಸ್ತವ.–(ಆದಿಕಾಂಡ 22:2.)

ಪವಿತ್ರ ಕುರ್‌ಆನಿನ ಸೂರಃ 'ಅಸ್ಸಾಫ್ಫಾತ್‌ನಲ್ಲಿ' ಇಸ್ಮಾಈಲ್(ಅ)ರ ಬಲಿದಾನದ ಘಟನೆ ಪ್ರಸ್ತಾಪಿಸಿದ ನಂತರದ ಸೂಕ್ತಗಳು ಹೀಗೆ ಮುಂದುವರಿಯುತ್ತವೆ.

كَذَٰلِكَ نَجْزِي الْمُحْسِنِينَ .إِنَّهُ مِنْ عِبَادِنَا الْمُؤْمِنِينَ. وَبَشَّرْنَاهُ بِإِسْحَاقَ نَبِيًّا مِنَ الصَّالِحِينَ

ನಾವು ಪುಣ್ಯ ಕಾರ್ಯವೆಸಗುವವರಿಗೆ ಇಂತಹದೇ ಸತ್ಫಲ ನೀಡುತ್ತೇವೆ. ನಿಶ್ಚಯವಾಗಿಯೂ ಅವರು ನಮ್ಮ ಸತ್ಯವಿಶ್ವಾಸಿ ದಾಸರಲ್ಲಾಗಿದ್ದರು. ನಾವು ಅವರಿಗೆ ಇಸ್ಹಾಕರ ಸುವಾರ್ತೆ ನೀಡಿದೆವು, ಸಜ್ಜನರ ಪೈಕಿ ಒಬ್ಬ ಪ್ರವಾದಿ.

(ಕುರ್‌ಆನ್– 37:110–112)

ಹೀಗೆ ಬಲಿದಾನದ ಘಟನೆಯ ನಂತರವೇ ಇಸ್ಹಾಕ್(ಅ)ರ ಜನನವಾಯಿತು ಎಂಬುದು ಇಲ್ಲಿ ಕೂಡಾ ಸ್ಪಷ್ಟವಾಗುತ್ತದೆ. ತಫ್ಸೀರ್ ಇಬ್ನ್ ಕಸೀರ್ ಇದೇ ವಾದವನ್ನು ಸವಿಸ್ತಾರವಾಗಿ ವಿವರಿಸುತ್ತದೆ.

(ಸೂರಃ ಅಸಾಫ್ಫಾತ್ – ಸೂಕ್ತ 101ರ ಟಿಪ್ಪಣಿ.)

ಮೌಲಾನಾ ಮೌದೂದಿಯವರ ತಫ್ಹೀಮುಲ್ ಕುರ್‌ಆನಿನಲ್ಲೂ ಈ ಬಗ್ಗೆ ಸುದೀರ್ಘವಾದ ವಿವರಣೆ ಇದೆ. (ತಫ್ಹೀಮುಲ್ ಕುರ್‌ಆನ್ –ಸೂರಃ ಅಸ್ಸಾಫ್ಫಾತ್– ಟಿಪ್ಪಣಿ 67.)

□

## ಇಸ್ಹಾಕ್(ಅ)ರ ಜನನ

ಇಬ್ರಾಹೀಮ್(ಅ)ರಿಗೆ ತಮ್ಮ ಇಳಿವಯಸ್ಸಿನಲ್ಲಿ ಅಲ್ಲಾಹನು ಇನ್ನೊಬ್ಬ ಮಗನ ಜನನದ ಶುಭವಾರ್ತೆ ನೀಡುತ್ತಾನೆ. ಅವರ ಪತ್ನಿ ಸಾರಾರಿಗೂ ಆಗ ವಯಸ್ಸಾಗಿತ್ತು. ಈ ಶುಭವಾರ್ತೆಯನ್ನು ಕೇಳಿ ಇಬ್ಬರಿಗೂ ಆಶ್ಚರ್ಯವಾಯಿತಾದರೂ ಅವರು ಅದರಿಂದಾಗಿ ಬಹಳ ಸಂತೋಷಪಟ್ಟರು. ಈ ವಾರ್ತೆ ಅವರಿಬ್ಬರ ಬಳಿ ಮುಟ್ಟಿದ ಘಟನೆಯು ಬಹಳ ಸ್ವಾರಸ್ಯಕರವಾಗಿದೆ. ಕುರ್‌ಆನ್‌ನ ಸೂರಃ ಅಲ್ ಹಿಜ್ರ್ 51ರಿಂದ56 ವರೆಗಿನ ಸೂಕ್ತಗಳು ಇದನ್ನು ವಿವರಿಸುತ್ತದೆ,

وَنَبِّئْهُمْ عَنْ ضَيْفِ إِبْرَاهِيمَ

ಇವರಿಗೆ ಇಬ್ರಾಹೀಮರ ಅತಿಥಿಗಳ ವೃತ್ತಾಂತವನ್ನೂ ತಿಳಿಸಿರಿ.

ಈ ಅತಿಥಿಗಳು ಅಲ್ಲಾಹನಿಂದ ಕಳುಹಿಸಲ್ಪಟ್ಟ ದೂತರು ಅರ್ಥಾತ್ ದೇವಚರರು ಎಂದು ಕೂಡಾ ಕುರ್‌ಆನ್ ಸ್ಪಷ್ಟಪಡಿಸುತ್ತದೆ.

وَلَقَدْ جَاءَتْ رُسُلُنَا إِبْرَاهِيمَ بِالْبُشْرَىٰ

ನಮ್ಮ ದೂತರು (ದೇವಚರರು) ಇಬ್ರಾಹೀಮರ ಬಳಿ ಸುವಾರ್ತೆಯೊಂದಿಗೆ ಬಂದರು.

(ಕುರ್‌ಆನ್ – 11:69)

ಆ ಅತಿಥಿಗಳು ಸಲಾಮ್ ಹೇಳುತ್ತಾ ಪ್ರವೇಶಿಸಿದರೂ ಇಬ್ರಾಹೀಮ್(ಅ)ರಿಗೆ ಅಪರಿಚಿತರನ್ನು ನೋಡಿ ಸ್ವಲ್ಪ ಭಯವಾಯಿತು.

إِذْ دَخَلُوا عَلَيْهِ فَقَالُوا سَلَامًا قَالَ إِنَّا مِنْكُمْ وَجِلُونَ

ಅವರು ಇವರಲ್ಲಿಗೆ ಬಂದು, "ನಿಮಗೆ ಶಾಂತಿ ಇರಲಿ" ಎಂದರು. ಆಗ ಇವರು, "ನಮಗೆ ನಿಮ್ಮ ಬಗೆಗೆ ಹೆದರಿಕೆಯಾಗುತ್ತಿದೆ" ಎಂದರು.

ಆ ಅತಿಥಿಗಳು ಅವರನ್ನು ಸಮಾಧಾನಿಸುತ್ತಾ ಆಶ್ಚರ್ಯಕರವಾದ ಒಂದು ಶುಭವಾರ್ತೆಯನ್ನು ನೀಡಿದರು.

قَالُوا لَا تَوْجَلْ إِنَّا نُبَشِّرُكَ بِغُلَامٍ عَلِيمٍ

ಆಗ ಅವರು, "ಹೆದರಬೇಡಿರಿ, ನಾವು ನಿಮಗೆ ಓರ್ವ ಮೇಧಾವಿಯಾದ ಪುತ್ರನ ಸುವಾರ್ತೆ ನೀಡುತ್ತೇವೆ" ಎಂದರು.

ತಾನು ಇನ್ನೊಮ್ಮೆ ಅಪ್ಪನಾಗುತ್ತೇನೆಂದು ಅರಿವಾದಾಗ ಅವರಿಗೆ ಸಹಜವಾಗಿಯೇ ಅವರ ಇಳಿವಯಸ್ಸು ನೆನಪಾಗಿ ತಕ್ಷಣ ಆ ಬಗ್ಗೆ ಸಂದೇಹ ವ್ಯಕ್ತಪಡಿಸಿದರು.

قَالَ أَبَشَّرْتُمُونِي عَلَىٰ أَنْ مَسَّنِيَ الْكِبَرُ فَبِمَ تُبَشِّرُونَ

ಇಬ್ರಾಹೀಮರು, "ಈ ವೃದ್ಧಾಪ್ಯದಲ್ಲಿ ನೀವು ನನಗೆ (ಮಗನ) ಸುವಾರ್ತೆ ನೀಡುತ್ತೀರಾ? ನೀವೆಂತಹ ಸುವಾರ್ತೆ ನೀಡುತ್ತಿರುವಿರೆಂದು ಕೊಂಚ ಯೋಚಿಸಿರಿ" ಎಂದರು.

ಆಗ ಆ ಅತಿಥಿಗಳು ತಮ್ಮ ಸಂದೇಶವನ್ನು ಪುನರುಚ್ಚರಿಸಿದರಲ್ಲದೆ ಇಬ್ರಾಹೀಮರಿಗೊಂದು ಉಪದೇಶವನ್ನೂ ನೀಡಿದರು.

قَالَ وَمَنْ يَقْنَطُ مِنْ رَحْمَةِ رَبِّهِ إِلَّا الضَّالُّونَ

ಆಗ ಅವರು, "ನಾವು ನಿಮಗೆ ಪರಮ ಸತ್ಯವಾಗಿರುವ ಸುವಾರ್ತೆ ನೀಡುತ್ತಿದ್ದೇವೆ– ನೀವು ನಿರಾಶರಾಗಬೇಡಿರಿ" ಎಂದು ಉತ್ತರ ಕೊಟ್ಟರು.

ಇಬ್ರಾಹೀಮರು ತಾವೆಂದೂ ನಿರಾಶರಾಗುವವರ ಪೈಕಿ ಸೇರಿದವರಲ್ಲ ಎಂಬುದನ್ನು ಅವರ ಮುಂದೆ ದೃಢಪಡಿಸಿದರು.

قَالَ وَمَنْ يَقْنَطُ مِنْ رَحْمَةِ رَبِّهِ إِلَّا الضَّالُّونَ

ಇಬ್ರಾಹೀಮರು, "ತಮ್ಮ ಪ್ರಭುವಿನ ಅನುಗ್ರಹದ ಬಗ್ಗೆ ಪಥಭ್ರಷ್ಟರು ಮಾತ್ರ ನಿರಾಶರಾಗುತ್ತಾರೆ" ಎಂದು ಹೇಳಿದರು.

ಸೂರಃ ಹೂದ್‌ನಲ್ಲಿ ಈ ಶುಭವಾರ್ತೆ ಕೇಳಿದಾಗ ಸಾರಾರ ಪ್ರತಿಕ್ರಿಯೆ ಹೇಗಿತ್ತು ಎಂಬುದರ ಬಗ್ಗೆ ಪ್ರಸ್ತಾಪವಿದೆ,

وَامْرَأَتُهُ قَائِمَةٌ فَضَحِكَتْ فَبَشَّرْنَاهَا بِإِسْحَاقَ وَمِنْ وَرَاءِ إِسْحَاقَ يَعْقُوبَ – قَالَتْ يَا

وَيْلَتَىٰ أَأَلِدُ وَأَنَا عَجُوزٌ وَهَٰذَا بَعْلِي شَيْخًا ۖ إِنَّ هَٰذَا لَشَيْءٌ عَجِيبٌ – قَالُوا أَتَعْجَبِينَ

مِنْ أَمْرِ اللَّهِ ۖ رَحْمَتُ اللَّهِ وَبَرَكَاتُهُ عَلَيْكُمْ أَهْلَ الْبَيْتِ ۚ إِنَّهُ حَمِيدٌ مَجِيدٌ

ಇಬ್ರಾಹೀಮರ ಪತ್ನಿಯೂ (ಅಲ್ಲೇ) ನಿಂತಿದ್ದರು. ಅವರು ಇದನ್ನು ಕೇಳಿ ನಕ್ಕುಬಿಟ್ಟರು. ಅನಂತರ ನಾವು ಆಕೆಗೆ ಇಸ್ಹಾಕ್ ಮತ್ತು ಇಸ್ಹಾಕರ ತರುವಾಯ ಯಾಕೂಬರ ಬಗೆಗೂ ಸುವಾರ್ತೆ ನೀಡಿದೆವು. ಅವರು (ಇಬ್ರಾಹೀಮರ ಪತ್ನಿ) ಹೇಳಿದರು: "ಅಕಟ! ನನ್ನ ದೌರ್ಭಾಗ್ಯವೇ, ನಾನು ಹಣ್ಣು ಮುದುಕಿಯೂ ನನ್ನ ಪತಿ ಅತಿ ವೃದ್ಧರೂ ಆಗಿರುವಾಗ ನನ್ನಲ್ಲಿ ಮಕ್ಕಳಾಗುವರೇ? ಇದಂತು ಅತ್ಯಂತ ಸೋಜಿಗದ ವಿಷಯ!"

ದೇವಚರರು, "ಅಲ್ಲಾಹನ ಆಜ್ಞೆಯ ಬಗ್ಗೆ ಆಶ್ಚರ್ಯಪಡುತ್ತೀರಾ? ಓ ಇಬ್ರಾಹೀಮರ ಮನೆಯವರೇ, ನಿಮ್ಮ ಮೇಲೆ ಅಲ್ಲಾಹನ ದಯೆ ಮತ್ತು ಸಮೃದ್ಧಿಗಳಿವೆ. ನಿಜವಾಗಿಯೂ ಅಲ್ಲಾಹ್ ಅತ್ಯಧಿಕ ಸ್ತುತ್ಯರ್ಹನೂ ಮಹಿಮಾವಂತನೂ ಆಗಿರುತ್ತಾನೆ" ಎಂದು ಹೇಳಿದರು.

(ಕುರ್‌ಆನ್- 11:71–73)

ಇಸ್ಮಾಈಲ್(ಅ)ರ ಜನನದ ವೇಳೆ ಒಬ್ಬ 'ಸಹನಶೀಲನಾದ ಪುತ್ರ' ಮತ್ತು ಇಸ್ಹಾಕ್(ಅ)ರ ಜನನದ ವೇಳೆ ಒಬ್ಬ 'ಮೇಧಾವಿಯಾದ ಪುತ್ರ' ಎಂದು ಹೇಳಿ ಖಲೀಲುಲ್ಲಾಹ್ ಇಬ್ರಾಹೀಮ(ಅ)ರಿಗೆ ತಮ್ಮ ಪ್ರವಾದಿತ್ವದ ದೌತ್ಯವನ್ನು ವರ್ಗಾಯಿಸಲು ಅಲ್ಲಾಹನು ಅತಿದೊಡ್ಡ ಕೊಡುಗೆಯನ್ನೇ ನೀಡಿದ್ದನು. ಅವರು ಆ ಬಗ್ಗೆ ಅಲ್ಲಾಹನಿಗೆ ಬಹಳ ಕೃತಜ್ಞರಾಗಿದ್ದರು ಕೂಡಾ-

الْحَمْدُ لِلَّهِ الَّذِي وَهَبَ لِي عَلَى الْكِبَرِ إِسْمَاعِيلَ وَإِسْحَاقَ ۚ إِنَّ رَبِّي لَسَمِيعُ الدُّعَاءِ

ಈ ವೃದ್ಧಾಪ್ಯದಲ್ಲಿ ನನಗೆ ಇಸ್ಮಾಈಲ್ ಮತ್ತು ಇಸ್ಹಾಕ್‌ರಂತಹ ಪುತ್ರರನ್ನು

ದಯಪಾಲಿಸಿದ ಅಲ್ಲಾಹನಿಗೆ ಕೃತಜ್ಞತೆ. ನಿಶ್ಚಯವಾಗಿಯೂ ನನ್ನ ಪ್ರಭು ಪ್ರಾರ್ಥನೆಯನ್ನು ಆಲಿಸುತ್ತಾನೆ.

(ಕುರ್‌ಆನ್ – 14:39)

ತರುವಾಯ ಪವಿತ್ರ ಕುರ್‌ಆನ್ ಇಸ್ಹಾಕ್(ಅ)ರ ಸಂತತಿಯ ಕುರಿತು ಸ್ಪಷ್ಟವಾದ ಮಾಹಿತಿಯನ್ನು ನೀಡಿದೆ ಮತ್ತು ಅವರ ಸಂತತಿಯಿಂದ ಅನೇಕಾರು ಪ್ರವಾದಿಗಳು ಬಂದಿರುವುದರ ಕುರಿತು ಕೂಡ ಪ್ರಸ್ತಾಪಿಸಿದೆ. ಆದರೆ ಇಸ್ಮಾಈಲ್(ಅ)ರ ಸಂತತಿಯ ಬಗ್ಗೆ ಕುರ್‌ಆನ್ ಹೆಚ್ಚೇನೂ ಹೇಳಲಿಲ್ಲ. ಬೈಬಲಿನಲ್ಲಿಯೂ ಆ ಕುರಿತ ಮಾಹಿತಿ ದೊರಕುವುದಿಲ್ಲ. ಇಬ್ನ್ ಅಬ್ಬಾಸ್(ರ)ರ ಒಂದು ವರದಿಯ ಪ್ರಕಾರ ಇಸ್ಮಾಈಲ್(ಅ)ರು ಯೌವನಾವಸ್ಥೆಗೆ ತಲುಪಿದಾಗ ಜುರ್ಹುಮ್ ಗೋತ್ರದ ಯುವತಿಯೊಂದಿಗೆ ಅವರ ವಿವಾಹ ನಡೆಯಿತು. ಇಬ್ರಾಹೀಮ್(ಅ)ಆಗಾಗ ಹಾಜಿರಾ(ರ್) ಮತ್ತು ಇಸ್ಮಾಈಲ್(ಅ)ರನ್ನು ಭೇಟಿಯಾಗಲು ಮಕ್ಕಾಕ್ಕೆ ಬರುತ್ತಿದ್ದರು.

ಒಂದೊಮ್ಮೆ ಅವರು ಇಸ್ಮಾಈಲ್(ಅ)ರ ಮದುವೆಯ ನಂತರ ಅವರ ಮನೆಗೆ ಭೇಟಿ ಕೊಡಲು ಆಗಮಿಸಿದರು. ಪತ್ನಿಗೆ ಅವರ ಮುಖತಃ ಪರಿಚಯವಿರಲಿಲ್ಲ. ತನ್ನ ಪತಿ ಜೀವನೋಪಾಯದ ಹುಡುಕಾಟಕ್ಕೆ ತೆರಳಿದ್ದಾರೆ ಅಂದರು. ಇಬ್ರಾಹೀಮ್(ಅ) ಕುಶಲೋಪರಿಯನ್ನು ವಿಚಾರಿಸಿದಾಗ ಆ ಮಹಿಳೆ ತಮ್ಮ ಕಷ್ಟಕಾರ್ಪಣ್ಯಗಳ ಚರಿತ್ರೆಯನ್ನೇ ಅವರ ಮುಂದೆ ಬಿಚ್ಚಿಟ್ಟರು. ಈ ಮಹಿಳೆ ಮಗನ ಪತ್ನಿಯಾಗಲು ಅರ್ಹಳಲ್ಲ ಎಂದು ಭಾವಿಸಿದ ಇಬ್ರಾಹೀಮ್(ಅ) ಆಕೆಯೊಡನೆ "ನಿನ್ನ ಪತಿ ಬಂದರೆ ಅವನೊಡನೆ ನಿಮ್ಮ ಮನೆಯ ಪ್ರವೇಶ ಬಾಗಿಲು ಸರಿಯಿಲ್ಲ, ಅದನ್ನು ಬದಲಿಸಲು ಹೇಳು" ಎಂದು ಹೇಳಿ ಅಲ್ಲಿಂದ ಹೋದರು. ಇಸ್ಮಾಈಲ್(ಅ)ರಿಗೆ ವಿಷಯ ತಿಳಿದಾಗ ಅವರಿಗೆ ಅದರ ಮರ್ಮ ಅರ್ಥವಾಯಿತು. ಪತ್ನಿಯೊಡನೆ ಆ ವ್ಯಕ್ತಿ ನನ್ನ ತಂದೆಯಾಗಿದ್ದಾರೆ. ಅವರು ನಿನ್ನನ್ನು ವಿಚ್ಛೇದಿಸುವಂತೆ ಸೂಚಿಸಿದ್ದಾರೆ ಎಂದು ಹೇಳಿ ಆ ಪತ್ನಿಯನ್ನು ತೊರೆದು ಬೇರೆ ವಿವಾಹವಾದರು. ಮತ್ತೊಮ್ಮೆ ಇಬ್ರಾಹೀಮ್(ಅ) ಮಗನ ಸಂಸಾರವನ್ನು ಕಂಡು ಹೋಗಲು ಬಂದಾಗ ಈ ಪತ್ನಿಯನ್ನು ನೋಡಿದರು. ಅದೇ ರೀತಿ ಕುಶಲೋಪರಿ ವಿಚಾರಿಸಿದಾಗ ಆ ಮಹಿಳೆ ತಮ್ಮ ಸಂಸಾರದ ಸಮೃದ್ಧಿಯ ಕುರಿತು ಹೇಳಿದರು. ಆಗ ಇಬ್ರಾಹೀಮ(ಅ)ರು "ನಿನ್ನ ಪತಿಗೆ ನನ್ನ ಸಲಾಂ ತಿಳಿಸು ಮತ್ತು ಈ ಮನೆಯ ಪ್ರವೇಶದ್ವಾರ ಚೆನ್ನಾಗಿದೆ ಇದನ್ನು ಬದಲಿಸಬೇಡವೆಂದು ತಿಳಿಸು" ಎಂದು ಹೇಳಿ ಅಲ್ಲಿಂದ ತೆರಳಿದರು. ಇಸ್ಮಾಈಲ್(ಅ) ಮನೆಗೆ ಬಂದು ಪತ್ನಿಯಿಂದ

ವಿಷಯ ತಿಳಿದಾಗ ಅವರಿಗೆ ಈಗ ತನ್ನ ತಂದೆಗೆ ಈ ತನ್ನ ಪತ್ನಿಯಿಂದ ಯಾವುದೇ ದೂರು ಇಲ್ಲ ಎಂದು ತಿಳಿಯಿತು.

(ಸಹೀಹ್ ಬುಖಾರಿ – ಕಿತಾಬುಲ್ ಅಂಬಿಯಾ.)

ಬೈಬಲಿನಲ್ಲಿ ಇಸ್ಮಾಈಲರಿಗೆ ಹನ್ನೆರಡು ಪುತ್ರರಿದ್ದರು ಮತ್ತು ಅವರೆಲ್ಲರೂ ಒಂದೊಂದು ಬುಡಕಟ್ಟಿನ ಸರದಾರರಾದರು ಎಂದು ಹೇಳಲಾಗಿದೆ.(ಆದಿಕಾಂಡ13,16)

ಹನ್ನೆರಡು ಪುತ್ರರ ಪೈಕಿ ಇದ್ದ ಖೈದರ್ ಎಂಬ ಪುತ್ರನ ಸಂತಾನದಿಂದ ಅನೇಕ ಶತಮಾನಗಳ ನಂತರ ಹಝ್ರತ್ ಪ್ರವಾದಿ ಮುಹಮ್ಮದ್ (ಸ) ರು ಹುಟ್ಟಿದರು ಎನ್ನಲಾಗಿದೆ.(ರಹ್ಮತುಲ್ಲಿಲ್ ಆಲಮೀನ್ – ಭಾಗ–2.)

□

# ಲೂತ್(ಅ)ರ ಕಾರ್ಯಕ್ಷೇತ್ರ

ಇಬ್ರಾಹೀಮ್(ಅ)ರ ಜೀವನಗಾಥೆಯ ಕುರಿತು ಅರಿಯುವಾಗ ಅದರಲ್ಲಿ ಪ್ರವಾದಿ ಲೂತ್(ಅ)ರ ಪ್ರಸ್ತಾಪ ಬಾರದೆ ಇರಲು ಸಾಧ್ಯವಿಲ್ಲ. ಯಾಕೆಂದರೆ ಅವರಿಬ್ಬರೂ ತಮ್ಮ ದೌತ್ಯದಲ್ಲಿ ಸಮಕಾಲೀನರಾಗಿದ್ದರು. ತಮ್ಮ ಹುಟ್ಟೂರಿನಿಂದ ಹೊರಡುವಾಗ ಇಬ್ರಾಹೀಮ್(ಅ)ರೊಂದಿಗೆ ಅವರ ಸೋದರ ಪುತ್ರರಾದ ಲೂತ್(ಅ) ಕೂಡಾ ಇದ್ದರು. ಅವರ ಮೇಲ್ವಿಚಾರಣೆಯಲ್ಲೇ ಲೂತ್(ಅ) ತರಬೇತಿ ಪಡೆದರು ಮತ್ತು ಇಬ್ರಾಹೀಮ್(ಅ)ರ ದೌತ್ಯಕಾಲದಲ್ಲೇ ಅವರನ್ನು ಸದೂಮ್ ಮತ್ತು ಗೊಮೋರಾ ದೇಶಕ್ಕೆ ಸೃಷ್ಟಿಕರ್ತನ ಸಂದೇಶವನ್ನು ತಲುಪಿಸಲು ಕಳುಹಿಸಲಾಗಿತ್ತು. ಈ ಪ್ರದೇಶ ಇಂದು ಇರಾಕ್ ಮತ್ತು ಫೆಲೆಸ್ತೀನ್ ದೇಶಗಳ ಮಧ್ಯೆ, ಜೋರ್ಡಾನಿನ ಪೂರ್ವಭಾಗದಲ್ಲಿದೆ. ಅದು ಬಹಳ ಸಮೃದ್ಧವಾದ ಸ್ಥಳವಾಗಿತ್ತು. ಸುತ್ತಲೂ ಬೃಹದಾಕಾರದಲ್ಲಿ ಬೆಳೆದು ನಿಂತ ಹಸಿರು ವೃಕ್ಷಗಳು ಕಂಗೊಳಿಸುತ್ತಿದ್ದ ಸುಂದರ ಭೂಭಾಗ.

ಇಸ್ಹಾಕ್(ಅ)ರ ಜನನದ ಕುರಿತು ಇಬ್ರಾಹೀಮ್(ಅ)ರಿಗೆ ತಿಳಿಸಲು ಬಂದ ದೂತರು ವಾಸ್ತವದಲ್ಲಿ ಲೂತ್(ಅ)ರನ್ನು ಕಳುಹಿಸಲ್ಪಟ್ಟ ಪ್ರದೇಶಕ್ಕೆ ಹೋಗುತ್ತಿದ್ದವರು. ಪುತ್ರನ ಶುಭವಾರ್ತೆ ಸಿಕ್ಕಿದ ನಂತರ ಇಬ್ರಾಹೀಮ್(ಅ) ಅವರೊಡನೆ ಅವರು ಯಾಕಾಗಿ ಅಲ್ಲಿಗೆ ಬಂದಿರುವುದು ಎಂದು ವಿಚಾರಿಸಿದಾಗ ಲೂತ್(ಅ)ರ ಸಮುದಾಯದ ಕಡೆಗೆ ಬಂದಿರುವುದಾಗಿ ಅವರು ಹೇಳಿದರು.

قَالَ فَمَا خَطْبُكُمْ أَيُّهَا الْمُرْسَلُونَ . قَالُوا إِنَّا أُرْسِلْنَا إِلَىٰ قَوْمٍ مُّجْرِمِينَ.

إِلَّا آلَ لُوطٍ إِنَّا لَمُنَجُّوهُمْ أَجْمَعِينَ إِلَّا امْرَأَتَهُ قَدَّرْنَا ۙ إِنَّهَا لَمِنَ الْغَابِرِينَ

"ಓ ದೇವದೂತರೇ, ನೀವು ಯಾವ ಕಾರ್ಯಾಚರಣೆಗಾಗಿ ಬಂದಿರುವಿರಿ?" ಎಂದು ಅವರು (ಇಬ್ರಾಹೀಮ್) ಕೇಳಿದರು. (ಆಗ) ಅವರು, "ನಾವು ಒಂದು ಅಪರಾಧಿ ಜನಾಂಗದ ಕಡೆಗೆ ಕಳುಹಿಸಲ್ಪಟ್ಟಿದ್ದೇವೆ. ಆದರೆ 'ಲೂತ್'ರ ಮನೆಯವರು ಇದಕ್ಕೆ ಹೊರತಾಗಿದ್ದಾರೆ. ಅವರ ಮನೆಯವರೆಲ್ಲರನ್ನೂ ನಾವು ರಕ್ಷಿಸುವೆವು. 'ಲೂತ್'ರ ಪತ್ನಿಯ ಹೊರತು; ಆಕೆ ಹಿಂದೆ ಉಳಿಯುವವರಲ್ಲಿ ಸೇರಿದವಳೆಂದು ನಾವು ವಿಧಿಸಿದ್ದೇವೆ (ಎಂದು ಅಲ್ಲಾಹನು ಹೇಳುತ್ತಾನೆ)" ಎಂದರು."

(ಕುರ್‌ಆನ್ –15: 57–60)

ಸದೂಮ್ ಮತ್ತು ಗೊಮೋರಾ ಪ್ರದೇಶದ ಜನರು ಸೃಷ್ಟಿಕರ್ತನನ್ನು ಮರೆತಿದ್ದರು. ಬಹಳ ಐಷಾರಾಮದ ಜೀವನ ಅವರನ್ನು ಹಾಗಾಗುವಂತೆ ಮಾಡಿತ್ತು. ದೇವ ಧಿಕ್ಕಾರಿಗಳ ಸಂಖ್ಯೆ ಹೇರಳವಾಗಿದ್ದರೂ ಬಹುದೇವಾರಾಧನೆಯನ್ನು ಪರಂಪರೆ ಎಂಬಂತೆ ಆಚರಿಸುತ್ತಿದ್ದರು. ಅದಲ್ಲದೆ ಇನ್ನೂ ಅನೇಕಾರು ಕೆಡುಕಿನ ಕಾರ್ಯಗಳಲ್ಲಿ ಮುಳುಗಿದ್ದರು. ಇವೆಲ್ಲದರೊಂದಿಗೆ ಆ ಜನಾಂಗವು ಒಂದು ವಿಚಿತ್ರವಾದ ಅಶ್ಲೀಲತೆಯನ್ನು ರೂಢಿಸಿಕೊಂಡಿತ್ತು. ಅಂದಿನ ಜಗತ್ತಿನಲ್ಲಿ ಯಾರೂ ಕಂಡರಿಯದ, ಎಲ್ಲೂ ಕೇಳಸಿಗದ ಒಂದು ವಿಲಕ್ಷಣ ಕೃತ್ಯವದು. ತಮ್ಮ ಕಾಮಾಪೇಕ್ಷೆ ತೀರಿಸಲಿಕ್ಕಾಗಿ ಅಲ್ಲಿನ ಪುರುಷರು ಸ್ತ್ರೀಯರನ್ನು ಸಮೀಪಿಸದೆ ಪುರುಷರ ಬಳಿ ಹೋಗುತ್ತಿದ್ದರು.ಅಲ್ಲಾಹನು ಆ ಕುರಿತು ಹೀಗೆನ್ನುತ್ತಾನೆ,

وَلُوطًا إِذْ قَالَ لِقَوْمِهِ أَتَأْتُونَ الْفَاحِشَةَ وَأَنْتُمْ تُبْصِرُونَ .أَئِنَّكُمْ لَتَأْتُونَ الرِّجَالَ

شَهْوَةً مِنْ دُونِ النِّسَاءِ ۚ بَلْ أَنْتُمْ قَوْمٌ تَجْهَلُونَ .

ಮತ್ತು ಲೂತರನ್ನು ನಾವು ಕಳುಹಿಸಿದೆವು. ಅವರು ತಮ್ಮ ಜನಾಂಗದವರೊಡನೆ ಹೇಳಿದ ಸಂದರ್ಭವನ್ನು ಸ್ಮರಿಸಿರಿ; "ನೀವು ಕಣ್ಣಾರೆ ಕಾಣುತ್ತಾ ದುಷ್ಕೃತ್ಯವೆಸಗುತ್ತೀರಾ? ಸ್ತ್ರೀಯರನ್ನು ಬಿಟ್ಟು ಪುರುಷರ ಬಳಿಗೆ ಕಾಮಾಪೇಕ್ಷೆ ನೀಗಿಸಲಿಕ್ಕಾಗಿ ಹೋಗುವುದೇ ನಿಮ್ಮ ಚಾಳಿಯೇ? ವಾಸ್ತವದಲ್ಲಿ ನೀವು ಅತ್ಯಂತ ತಿಳಿಗೇಡಿ ಕಾರ್ಯವನ್ನೆಸಗುತ್ತೀರಿ."

(ಕುರ್‌ಆನ್ – 27: 54,55)

ಎಲ್ಲಾ ತರಹದ ಮುನ್ನೆಚ್ಚರಿಕೆ ಕೊಟ್ಟ ಬಳಿಕವೂ ಆ ದುಷ್ಟಜನರು ತಮ್ಮ ಪಾಪಕೃತ್ಯವನ್ನು ತೊರೆಯದಿರುವಾಗ ಅಲ್ಲಾಹನು ದೇವದೂತರನ್ನು ಆ ಜನಾಂಗದ ವಿನಾಶಕ್ಕಾಗಿ ಕಳುಹಿಸಿದನು. ಇಬ್ರಾಹೀಮ್(ಅ)ರೊಡನೆ ಆ ಕುರಿತು ದೇವದೂತರು ಪ್ರಸ್ತಾಪಿಸಿದಾಗ ಅವರ ಕೋಮಲ ಮನಸ್ಸು ಆ ಜನರಿಗೆ ಬಾಧಿಸುವ ಮಹಾಶಿಕ್ಷೆಯನ್ನು ನೆನಸಿ ಒಮ್ಮೆಲೇ ಕಂಪಿಸಿತ್ತು. ಇಬ್ರಾಹೀಮರದ್ದು ಬಹಳ ಸೌಮ್ಯಸ್ವಭಾವ. ಇತರರ ಯಾತನೆಗೆ ಮಿಡಿಯುವ ಮೃದು ಹೃದಯ. ಅವರು ಆ ಮಹಾ ಶಿಕ್ಷೆ ಬೇಡವೆಂದು ವಾದಿಸುತ್ತಾರೆ. ಆ ಮಾತುಗಳು ಕುರ್‌ಆನಿನಲ್ಲಿ ಉಲ್ಲೇಖವಾಗಿದೆ,

فَلَمَّا ذَهَبَ عَنْ إِبْرَاهِيمَ الرَّوْعُ وَجَاءَتْهُ الْبُشْرَىٰ يُجَادِلُنَا فِي قَوْمِ لُوطٍ

**ಹೀಗೆ ಇಬ್ರಾಹೀಮರ ಭಯ ನೀಗಿದಾಗ ಮತ್ತು (ಸಂತತಿಯುಂಟಾಗಬಹುದೆಂಬ ಶುಭವಾರ್ತೆಯಿಂದ) ಅವರಿಗೆ ಸಂತೋಷವಾದಾಗ ಅವರು ನಮ್ಮೊಡನೆ ಲೂತ್ ಜನಾಂಗದ ಕುರಿತು 'ಜಗಳ' ಆರಂಭಿಸಿದರು.**

**(ಕುರ್‌ಆನ್ 11:74)**

ಆಗ ಅಲ್ಲಾಹನು ಇಬ್ರಾಹೀಮ(ಅ)ರ ಆ ಜಗಳಕ್ಕೆ ಅವರ ದಯಾಪರತೆಯೇ ಕಾರಣ ಎಂದು ಕೂಡ ಹೇಳುತ್ತಾನೆ.

إِنَّ إِبْرَاهِيمَ لَحَلِيمٌ أَوَّاهٌ مُنِيبٌ

**ವಾಸ್ತವದಲ್ಲಿ ಇಬ್ರಾಹೀಮರು ಸಹನಶೀಲರೂ ಕೋಮಲ ಹೃದಯಿಯೂ ಎಲ್ಲ ಸ್ಥಿತಿಗಳಲ್ಲೂ ನಮ್ಮ ಕಡೆಗೆ ಒಲಿಯುವವರೂ ಆಗಿದ್ದರು.**

**(ಕುರ್‌ಆನ್ 11:75)**

ದೇವಚರರು ಅದು ಅಲ್ಲಾಹನ ತೀರ್ಮಾನವಾಗಿದೆ ಎಂದು ಹೇಳಿದಾಗ ಇಬ್ರಾಹೀಮ್(ಅ) ಅದಕ್ಕೆ ಮಣಿದು ಬಿಟ್ಟರು.

يَا إِبْرَاهِيمُ أَعْرِضْ عَنْ هَٰذَا ۖ إِنَّهُ قَدْ جَاءَ أَمْرُ رَبِّكَ ۖ وَإِنَّهُمْ آتِيهِمْ عَذَابٌ غَيْرُ مَرْدُودٍ

(ಕೊನೆಗೆ ನಮ್ಮ ದೇವಚರರು ಅವರೊಡನೆ ಹೇಳಿದರು:)

**"ಓ ಇಬ್ರಾಹೀಮರೇ, ಇನ್ನು ವಾದಿಸಬೇಡಿರಿ. ನಿಶ್ಚಯವಾಗಿಯೂ ನಿಮ್ಮ ಪ್ರಭುವಿನ ಅಪ್ಪಣೆ ಆಗಿ ಹೋಗಿದೆ. ಇನ್ನು ಅವರ ಮೇಲೆ ಯಾರಿಂದಲೂ ನೀಗಿಸಲಾಗದಂತಹ ಯಾತನೆ ಬಂದೇ ತೀರುವುದು** **(ಕುರ್‌ಆನ್ 11:76)**

ಆ ಜನಾಂಕದ ಲೈಂಗಿಕ ಅರಾಜಕತೆ ಎಷ್ಟು ಕೀಳು ಮಟ್ಟಕ್ಕೆ ತಲುಪಿತ್ತೆಂದರೆ ಲೂತ್(ಅ)ರ ಮನೆಗೆ ಅತಿಥಿಗಳು ಬಂದಿದ್ದಾರೆ ಎಂದು ತಿಳಿದಾಗ ಅನೇಕರು ಆ ಪುರುಷರೊಡನೆಯೂ ಈ ಕೃತ್ಯವೆಸಗಬಹುದು ಎಂದೆನಿಸಿ ಅಲ್ಲಿಗೆ ಓಡೋಡಿ ಬಂದರು.

وَجَاءَ أَهْلُ الْمَدِينَةِ يَسْتَبْشِرُونَ .قَالَ إِنَّ هَؤُلَاءِ ضَيْفِي فَلَا تَفْضَحُونِ .وَاتَّقُوا اللهَ وَلَا تُخْزُونِ

ಇಷ್ಟರಲ್ಲಿ ನಗರದವರು ಸಂತೋಷದಿಂದ ಮೈಮರೆತು ಲೂತರ ಮನೆಗೆ ಧಾವಿಸಿ ಬಂದರು. ಲೂತರು ಹೇಳಿದರು, "ಬಂಧುಗಳೇ, ಇವರು ನನ್ನ ಅತಿಥಿಗಳು– ನನ್ನನ್ನು ಅವಮಾನಿಸಬೇಡಿರಿ. ಅಲ್ಲಾಹನನ್ನು ಭಯಪಡಿರಿ– ನನ್ನನ್ನು ಅಪಮಾನಕ್ಕೀಡು ಮಾಡಬೇಡಿರಿ."

(ಕುರ್‌ಆನ್–15:67–69)

ಅಂತಹ ಘೋರ ಅಶ್ಲೀಲತೆಯನ್ನು ಮಾಡಿಯೂ ಕೂಡಾ ಯಾವುದೇ ಶಿಕ್ಷೆಗೆ ಹೆದರುವುದಿಲ್ಲ ಎಂದು ಸಾರುವ ದುರಹಂಕಾರಿ ಜನಾಂಗವಾಗಿತ್ತು ಅದು.

فَمَا كَانَ جَوَابَ قَوْمِهِ إِلَّا أَنْ قَالُوا ائْتِنَا بِعَذَابِ اللَّهِ إِنْ كُنْتَ مِنَ الصَّادِقِينَ

ಆ ಜನಾಂಗದ ಉತ್ತರ ಹೀಗಿತ್ತು "ನೀನು ಸತ್ಯವಾದಿಯಾಗಿದ್ದರೆ ಅಲ್ಲಾಹನ ಯಾತನೆಯನ್ನು ತನ್ನಿ –(ಕುರ್‌ಆನ್ 29:29)

ಕೊನೆಗೆ ಅಲ್ಲಾಹನ ಯಾತನೆ ಅವರ ಮೇಲೆ ಬಂದೇ ಬಿಟ್ಟಿತು.

فَأَخَذَتْهُمُ الصَّيْحَةُ مُشْرِقِينَ .فَجَعَلْنَا عَالِيَهَا سَافِلَهَا وَأَمْطَرْنَا عَلَيْهِمْ حِجَارَةً مِنْ سِجِّيلٍ

ಕಟ್ಟಕಡೆಗೆ ಉಷಃಕಾಲವಾದೊಡನೆ ಅವರ ಮೇಲೆ ಒಂದು ಭಯಾನಕ ಸ್ಫೋಟವೆರಗಿತು. ನಾವು ಆ ನಾಡನ್ನು ಬುಡಮೇಲು ಮಾಡಿಬಿಟ್ಟೆವು ಮತ್ತು ಅವರ ಮೇಲೆ ಸುಡು ಮಣ್ಣಿನ ಕಲ್ಲುಗಳ ಮಳೆಗರೆದೆವು.

(ಕುರ್‌ಆನ್–15:73–74)



## ಕಅಬಾ ಭವನದ ನಿರ್ಮಾಣ

ಇಬ್ರಾಹೀಮ್(ಅ) ತಮ್ಮೆಲ್ಲಾ ಕರ್ತವ್ಯಗಳನ್ನು ಬಹಳ ಶ್ರದ್ಧೆಯಿಂದ ಪೂರೈಸುತ್ತಾ, ದೇವನ ಸಂದೇಶವನ್ನು ಜನರ ಬಳಿಗೆ ತಲುಪಿಸುತ್ತಾ, ಏಕದೇವತ್ವದ ಕಲ್ಪನೆಯನ್ನು ಜನರ ಮನಸ್ಸುಗಳಲ್ಲಿ ಹುಟ್ಟುಹಾಕುತ್ತಾ ಮುಂದೆ ಸಾಗುತ್ತಿದ್ದರು. ಅವರು ತಮ್ಮ ಕರ್ತವ್ಯ ನಿರ್ವಹಣೆಯ ಹಾದಿಯಲ್ಲಿ ಒಂದಿಷ್ಟೂ ಎಡವಿದವರಲ್ಲ. ತಮ್ಮಿಬ್ಬರು ಪುತ್ರರಿಗೂ ಅವರು ಇದೇ ಕರ್ತವ್ಯ ನಿರ್ವಹಣೆಯ ಹಾದಿಯ ಮಾರ್ಗದರ್ಶನ ನೀಡಿದ್ದರು. ತಮ್ಮ ಪ್ರಭುವಿನ ಸರ್ವರೀತಿಯ ಆಜ್ಞೆಗಳ ನಿಷ್ಠಾವಂತ ಪಾಲಕರಾಗಿದ್ದರು. ಹಾಗಿರುವಾಗ ಅಲ್ಲಾಹನು ಅವರಿಗೆ ಇನ್ನೊಂದು ಮಹತ್ತರವಾದ ಜವಾಬ್ದಾರಿಕೆಯನ್ನು ನೀಡಿದನು. ಈ ಭೂಮುಖದ ಮೇಲೆ ಏಕದೇವಾರಾಧನೆಗಾಗಿ ಸ್ಥಾಪನೆಯಾಗಬೇಕಾದ ಮೊಟ್ಟಮೊದಲ ಆರಾಧನಾಲಯವನ್ನು ನಿರ್ಮಿಸಬೇಕಾದ ಭಾರಿ ಹೊಣೆಗಾರಿಕೆ. ಅದನ್ನು ನಿರ್ಮಿಸಬೇಕಾದ ಸ್ಥಳವನ್ನೂ ಸರ್ವಲೋಕಗಳ ಪ್ರಭುವೇ ನಿಶ್ಚಯಿಸಿದನು,

وَإِذْ بَوَّأْنَا لِإِبْرَاهِيمَ مَكَانَ الْبَيْتِ أَنْ لَا تُشْرِكْ بِي شَيْئًا وَطَهِّرْ بَيْتِيَ

لِلطَّائِفِينَ وَالْقَائِمِينَ وَالرُّكَّعِ السُّجُودِ

ನಾವು ಇಬ್ರಾಹೀಮರಿಗೆ ಈ ಭವನ(ಕಅಬಾ)ದ ಸ್ಥಳವನ್ನು ಗೊತ್ತುಪಡಿಸಿ ಕೊಟ್ಟ ಸಂದರ್ಭವನ್ನು ಸ್ಮರಿಸಿರಿ. (ಅವರಿಗೆ ಹೀಗೆ ಆದೇಶಿಸಲಾಗಿತ್ತು;) "ನನ್ನ ಜೊತೆ ಯಾವುದೇ ವಸ್ತುವನ್ನೂ ಸಹಭಾಗಿಯಾಗಿ ಮಾಡದಿರಿ. ನನ್ನ ಭವನವನ್ನು ಪ್ರದಕ್ಷಿಣೆ ಮಾಡುವವರಿಗಾಗಿಯೂ (ನಮಾಝಿಗೆ) ನಿಲ್ಲುವವರಿಗಾಗಿಯೂ ಬಾಗುವವರಿಗಾಗಿಯೂ ಸಾಷ್ಟಾಂಗ ಮಾಡುವವರಿಗಾಗಿಯೂ ನಿರ್ಮಲವಾಗಿರಿಸಿರಿ".

(ಕುರ್‌ಆನ್–22:26)

ಅಲ್ಲಾಹನು ಇಬ್ರಾಹೀಮ್(ಅ)ರೊಂದಿಗೆ ಅವರ ಪುತ್ರ ಇಸ್ಮಾಈಲ್(ಅ)ರಿಗೂ ಈ ಪವಿತ್ರ ಭವನದ ನಿರ್ಮಾಣದ ಕೆಲಸವನ್ನು ನೀಡಿದನು. ಪವಿತ್ರ ಕುರ್‌ಆನಿನ ಎರಡನೆಯ ಅಧ್ಯಾಯದ 127 ಮತ್ತು 128ನೆಯ ಸೂಕ್ತಗಳಲ್ಲಿ ಇದನ್ನು ಪ್ರಸ್ತಾಪಿಸಲಾಗಿದೆ. ಸೃಷ್ಟಿಕರ್ತನು ತನ್ನಿಬ್ಬರು ದಾಸರು ತನ್ನ ಭವನ ನಿರ್ಮಾಣದ ಕಾರ್ಯ ಕೈಗಿಟ್ಟಿದ್ದನ್ನು ನೆನಪಿಸುತ್ತಾನೆ,

وَإِذْ يَرْفَعُ إِبْرَاهِيمُ الْقَوَاعِدَ مِنَ الْبَيْتِ وَإِسْمَاعِيلُ

"ಇಬ್ರಾಹೀಮರೂ, ಇಸ್ಮಾಈಲರೂ ಆ ಭವನದ ಭಿತ್ತಿಗಳನ್ನೇರಿಸುತ್ತಿದ್ದ ಸಂದರ್ಭ"

ಅಷ್ಟೊಂದು ಮಹತ್ವವಾದ ಕೆಲಸವನ್ನು ನಿರ್ವಹಿಸಲು ತಮ್ಮನ್ನು ಸೃಷ್ಟಿಕರ್ತನು ಆಯ್ಕೆ ಮಾಡಿದ್ದಾನೆ ಎಂಬುದನ್ನು ಅರಿತು ಕೂಡಾ ಅವರಿಬ್ಬರಲ್ಲಿ ಕಿಂಚಿತ್ ಅಹಂಕಾರವಿರಲಿಲ್ಲ. ಅವರು ತಮ್ಮೀ ಕೆಲಸವು ತಮ್ಮ ಪ್ರಭುವಿನಲ್ಲಿ ಸ್ವೀಕಾರವಾಗಲಿ ಎಂಬ ಆಶಾಭಾವನೆಯೊಂದಿಗೆ ಪ್ರಭುವಿನ ಮೊರೆಹೊಕ್ಕರು.

رَبَّنَا تَقَبَّلْ مِنَّا إِنَّكَ أَنْتَ السَّمِيعُ الْعَلِيمُ

**(ಆಗ ಅವರಿಬ್ಬರೂ ಹೀಗೆ ಪ್ರಾರ್ಥಿಸುತ್ತಲೇ ಇದ್ದರು)– "ಓ ನಮ್ಮ ಪ್ರಭೂ! ನಮ್ಮಿಂದ ಈ ಸೇವೆಯನ್ನು ಸ್ವೀಕರಿಸು; ನಿಶ್ಚಯವಾಗಿಯೂ ನೀನು ಎಲ್ಲವನ್ನೂ ಆಲಿಸುವವನೂ, ಎಲ್ಲವನ್ನೂ ತಿಳಿದವನೂ ಆಗಿರುತ್ತೀ."**

ತಮ್ಮನ್ನು ವಿಧೇಯರನ್ನಾಗಿ ಮಾಡು ಎಂದು ಪ್ರಭುವಿನಲ್ಲಿ ಕೇಳಿಕೊಳ್ಳುತ್ತಾ ಅವರಿಬ್ಬರ ಪ್ರಾರ್ಥನೆ ಮುಂದುವರಿಯುತ್ತದೆ,

رَبَّنَا وَاجْعَلْنَا مُسْلِمَيْنِ لَكَ

**ಓ ಪ್ರಭೂ, ನಮ್ಮೀರ್ವರನ್ನು ನಿನ್ನ ಆಜ್ಞಾನುಸಾರಿಗಳಾಗಿ ಮಾಡು!**

ಅಷ್ಟಕ್ಕೇ ಅವರ ಪ್ರಾರ್ಥನೆ ಮುಗಿಯಲಿಲ್ಲ. ತಮ್ಮ ಮುಂದಿನ ಪೀಳಿಗೆಯ ಬಗ್ಗೆ ಕಳಕಳಿ ಇತ್ತು. ತಮ್ಮ ಸಂತಾನವೂ ಸೃಷ್ಟಿಕರ್ತನಿಗೆ ವಿಧೇಯರಾಗಿರಬೇಕೆಂಬ ಮಹದಾಸೆಯಿತ್ತು. ಎಲ್ಲರೂ ದೇವಾಜ್ಞೆಯನ್ನು ಅದರ ಸರಿಯಾದ ನಿಯಮಗಳೊಂದಿಗೆ ಪಾಲಿಸುವವರಾಗಬೇಕು ಎಂಬ ಚಿಂತೆ ಇತ್ತು. ಹಾಗಾಗಿ ಪ್ರಾರ್ಥನೆಯನ್ನು ಮುಂದುವರಿಸಿದರು,

وَمِنْ ذُرِّيَّتِنَا أُمَّةً مُسْلِمَةً لَكَ وَأَرِنَا مَنَاسِكَنَا وَتُبْ عَلَيْنَا إِنَّكَ أَنْتَ التَّوَّابُ الرَّحِيمُ

**"ನಮ್ಮ ಸಂತತಿಯಲ್ಲಿ ನಿನ್ನ ಆಜ್ಞಾನುಸಾರಿಯಾದ ಒಂದು ಸಮುದಾಯವನ್ನು ಎಬ್ಬಿಸು. ನಮಗೆ ನಿನ್ನ ದಾಸ್ಯ–ಆರಾಧನೆಯ ಕ್ರಮಗಳನ್ನು ತೋರಿಸಿ ಕೊಡು ಮತ್ತು ನಮ್ಮ ಅಪರಾಧಗಳನ್ನು ಕ್ಷಮಿಸು. ನೀನು ಮಹಾಕ್ಷಮಾದಾನಿಯೂ, ಕರುಣಾನಿಧಿಯೂ ಆಗಿರುತ್ತೀಯೆ."**

ಕರ್ತವ್ಯನಿಷ್ಠೆಯಲ್ಲಿ ಕುಂದುಂಟಾದರೆ? ಎಂಬ ಭಯಕೂಡ ಈ ಪ್ರಾರ್ಥನೆಯಲ್ಲಿ ಕಾಣುತ್ತದೆಯಾದರೂ ಕರುಣಾಮಯಿಯಾದ ತಮ್ಮ ಪ್ರಭು ಪಾಪಗಳನ್ನು ಕ್ಷಮಿಸುತ್ತಾನೆ ಎಂಬ ಆಶಾ ಭಾವನೆಯೂ ಇದರಲ್ಲಿ ಕಾಣಸಿಗುತ್ತದೆ.

ಎಂತಹ ಅಪೂರ್ವವಾದ ವಿಧೇಯತೆ! ಆಜ್ಞಾನುಸರಣೆಯ ಸರಿಯಾದ ಶಿಷ್ಟಾಚಾರದ ಸ್ಪಷ್ಟಚಿತ್ರಣ!

ಭವನ ನಿರ್ಮಾಣದ ಕುರಿತು ಒಂದು ಸಂಕ್ಷಿಪ್ತ ವಿವರಣೆಯ ಹದೀಸ್ 'ಸಹೀಹುಲ್ ಬುಖಾರಿ' ಯ 'ಕಿತಾಬುಲ್ ಅಂಬಿಯಾ' ಎಂಬ ಅಧ್ಯಾಯದಲ್ಲಿ ಕಾಣಸಿಗುತ್ತದೆ.

ಮಕ್ಕಾದಲ್ಲಿ ಆನಂತರ ಜನಸಂಖ್ಯೆ ಬೆಳೆಯತೊಡಗಿತು. ಅಲ್ಲಿನ ಜನರಿಗಾಗಿಯೂ ಮುಂದಿನ ಪೀಳಿಗೆಗಾಗಿಯೂ ಅಲ್ಲಾಹನಲ್ಲಿ ಪ್ರಾರ್ಥಿಸಲು ಇಬ್ರಾಹೀಮ್(ಅ) ಮರೆಯಲಿಲ್ಲ. ಸೂರಃ ಅಲ್ 'ಬಕರಃದ 124ನೆಯ ಸೂಕ್ತದಲ್ಲಿ ಇದರ ಉಲ್ಲೇಖವಿದೆ. ಅಲ್ಲಾಹನು ತನ್ನ ದಾಸನನ್ನು ಪರೀಕ್ಷೆಗೆ ಒಳಪಡಿಸಿದ ವಿಷಯವನ್ನು ಪ್ರಸ್ತಾಪಿಸುತ್ತಾ ಆ ಬಗ್ಗೆ ಹೇಳುತ್ತಾನೆ,

وَإِذِ ابْتَلَىٰ إِبْرَاهِيمَ رَبُّهُ بِكَلِمَاتٍ فَأَتَمَّهُنَّ

'ಇಬ್ರಾಹೀಮರನ್ನು ಅವರ ಪ್ರಭು ಕೆಲವು ವಿಷಯಗಳಲ್ಲಿ ಪರೀಕ್ಷಿಸಿದ ಸಂದರ್ಭವನ್ನು ಸ್ಮರಿಸಿರಿ. ಅವರು ಅವುಗಳಲ್ಲೆಲ್ಲಾ ಸಫಲರಾದರು'

ನಂತರ ಸೃಷ್ಟಿಕರ್ತನು ಅವರಿಗೆ ಲೋಕನಾಯಕತ್ವವನ್ನು ದಯಪಾಲಿಸಿದನು.

قَالَ إِنِّي جَاعِلُكَ لِلنَّاسِ إِمَامًا

ಆಗ ಅಲ್ಲಾಹನು, "ನಾನು ನಿಮ್ಮನ್ನು ಸರ್ವಜನರ ನಾಯಕನನ್ನಾಗಿ ಮಾಡುವವನಿದ್ದೇನೆ" ಎಂದನು.

ಇಂತಹ ಸನ್ಮಾನ ಪ್ರಾಪ್ತಿಯಾದಾಗಲೂ ಅವರಿಗೆ ಹರ್ಷೋಲ್ಲಾಸವಾಗುವುದಕ್ಕಿಂತ ಹೆಚ್ಚಾಗಿ ತಮ್ಮ ಮುಂದಿನ ಪೀಳಿಗೆಯ ಬಗ್ಗೆ ಚಿಂತೆಯಾಯಿತು. ಅಲ್ಲಾಹನಲ್ಲಿ ಕೇಳಿದರು,

قَالَ وَمِنْ ذُرِّيَّتِي

ಇಬ್ರಾಹೀಮರು, "ನನ್ನ ಸಂತಾನಗಳಿಗೂ ಇದೇ ವಾಗ್ದಾನವೇ?" ಎಂದು ಬಿನ್ನವಿಸಿದರು.

ನಾಯಕತ್ವದ ಈ ಹಕ್ಕು ಪರಂಪರಾಗತವಲ್ಲ, ಅದು ಕೇವಲ ಆಜ್ಞಾಪಾಲಕರಾದ ದಾಸರಿಗೆ ಮೀಸಲು ಎಂಬುದನ್ನು ಅಲ್ಲಾಹನು ಸ್ಪಷ್ಟಪಡಿಸಿದನು.

قَالَ لَا يَنَالُ عَهْدِي الظَّالِمِينَ

ಆಗ ಅಲ್ಲಾಹ್, "ನನ್ನ ವಾಗ್ದಾನವು ಅಕ್ರಮಿಗಳಿಗೆ ಅನ್ವಯಿಸುವುದಿಲ್ಲ" ಎಂದು ಉತ್ತರಿಸಿದನು.

ನಂತರ ಅಲ್ಲಾಹನು ಸೂಕ್ತಗಳನ್ನು ಮುಂದುವರಿಸುತ್ತಾ ತನ್ನ ಪವಿತ್ರ ಭವನದ ನಿರ್ಮಾಣದಲ್ಲಿ ಅಡಗಿದ ನೈಜ ಉದ್ದೇಶವನ್ನು ವಿವರಿಸಿದನು,

وَإِذْ جَعَلْنَا الْبَيْتَ مَثَابَةً لِلنَّاسِ وَأَمْنًا وَاتَّخِذُوا مِنْ مَقَامِ إِبْرَاهِيمَ مُصَلًّى وَعَهِدْنَا إِلَىٰ

إِبْرَاهِيمَ وَإِسْمَاعِيلَ أَنْ طَهِّرَا بَيْتِيَ لِلطَّائِفِينَ وَالْعَاكِفِينَ وَالرُّكَّعِ السُّجُودِ

ನಾವು ಆ ಭವನ(ಕಅಬಾ)ವನ್ನು ಜನರಿಗೆ ಕೇಂದ್ರ ಹಾಗೂ ಶಾಂತಿ ಸ್ಥಾನವನ್ನಾಗಿ ನಿಶ್ಚಯಿಸಿದ ಸಂದರ್ಭವನ್ನು (ಸ್ಮರಿಸಿರಿ). "ಇಬ್ರಾಹೀಮರು ಆರಾಧನೆಗಾಗಿ ನಿಲ್ಲುವ ಸ್ಥಾನವನ್ನು ನೀವು ಸ್ಥಿರವಾದ ನಮಾಝ್‌ನ ತಾಣವನ್ನಾಗಿಸಿಕೊಳ್ಳಿರಿ" ಎಂದು ನಾವು ಜನರಿಗೆ ಆಜ್ಞಾಪಿಸಿದ್ದೆವು. "ನನ್ನ ಈ ಭವನದ ಪ್ರದಕ್ಷಿಣೆ ಮತ್ತು ತಪಶ್ಚರ್ಯೆ, ಬಾಗುವವರಿಗಾಗಿ ಹಾಗೂ ಸಾಷ್ಟಾಂಗವೆರಗುವವರಿಗಾಗಿ ನಿರ್ಮಲವಾಗಿರಿಸಿರಿ" ಎಂದು ಇಬ್ರಾಹೀಮ್ ಮತ್ತು ಇಸ್ಮಾಈಲರಿಗೆ ತಾಕೀತು ಮಾಡಿದ್ದೆವು

(ಕುರ್‌ಆನ್–2:125)

ಹೀಗೆ ಮಕ್ಕಾದಲ್ಲಿರುವ ಈ ಪವಿತ್ರ ಭವನವು ಸೃಷ್ಟಿಕರ್ತನ ಆರಾಧನೆಗಾಗಿ ನಿರ್ಮಿಸಲ್ಪಟ್ಟ ಪ್ರಥಮ ಆರಾಧನಾಲಯವೆಂದು ಪವಿತ್ರ ಕುರ್‌ಆನ್ ಸ್ಪಷ್ಟಪಡಿಸಿತು.

إِنَّ أَوَّلَ بَيْتٍ وُضِعَ لِلنَّاسِ لَلَّذِي بِبَكَّةَ مُبَارَكًا وَهُدًى لِلْعَالَمِينَ

ನಿಶ್ಚಯವಾಗಿಯೂ ಮಾನವರಿಗಾಗಿ ನಿರ್ಮಿಸಲ್ಪಟ್ಟ ಪ್ರಥಮ ಆರಾಧನಾಲಯವು ಮಕ್ಕಾದಲ್ಲಿರುವುದೇ ಆಗಿರುತ್ತದೆ. ಅದಕ್ಕೆ ಶುಭ ಸಮೃದ್ಧಿಗಳನ್ನು ನೀಡಲಾಗಿತ್ತು ಮತ್ತು ಅದು ಸಮಗ್ರ ಲೋಕದವರಿಗೆ ಸನ್ಮಾರ್ಗ ದರ್ಶನದ ಕೇಂದ್ರವನ್ನಾಗಿ ಮಾಡಲ್ಪಟ್ಟಿತ್ತು. (ಕುರ್‌ಆನ್–3:96)

ನಾಯಕತ್ವದ ಕೊಡುಗೆಗೆ ಎಲ್ಲರೂ ಅರ್ಹರಾಗುವುದಿಲ್ಲವೆಂದು ಅಲ್ಲಾಹನು ಸ್ಪಷ್ಟಪಡಿಸಿದ್ದರಿಂದ ಇಬ್ರಾಹೀಮ್ ತಮ್ಮ ಮುಂದಿನ ಪ್ರಾರ್ಥನೆಯನ್ನು ಸತ್ಯವಿಶ್ವಾಸಿಗಳಿಗೆ ಮಾತ್ರ ಮೀಸಲಿಟ್ಟರು. ಸೂರಃ ಅಲ್ ಬಕರಃದ ಸೂಕ್ತ–126

ಇದನ್ನು ಉಲ್ಲೇಖಿಸುತ್ತದೆ

وَإِذْ قَالَ إِبْرَاهِيمُ رَبِّ اجْعَلْ هَٰذَا بَلَدًا آمِنًا وَارْزُقْ أَهْلَهُ مِنَ
الثَّمَرَاتِ مَنْ آمَنَ مِنْهُمْ بِاللَّهِ وَالْيَوْمِ الْآخِرِ

ಇಬ್ರಾಹೀಮರು, "ಓ ನನ್ನ ಪ್ರಭೂ! ಈ ನಗರವನ್ನು ಶಾಂತಿಯ ನಗರವನ್ನಾಗಿ ಮಾಡು ಮತ್ತು ಇಲ್ಲಿಯ ನಿವಾಸಿಗಳ ಪೈಕಿ ಅಲ್ಲಾಹ್ ಮತ್ತು ಅಂತಿಮ ದಿನದಲ್ಲಿ ವಿಶ್ವಾಸವಿಡುವವರಿಗೆ ನಾನಾ ಫಲಗಳ ಆಹಾರವನ್ನು ನೀಡು" ಎಂದ ಸಂದರ್ಭವನ್ನು (ಸ್ಮರಿಸಿರಿ).

ಅಲ್ಲಾಹನು ತಕ್ಷಣವೇ ಅವರನ್ನು ತಿದ್ದಿದನು. ಜೀವನೋಪಾಯಕ್ಕೆ ದೇವಾಧಿಕ್ಕರಿಗಳನ್ನೂ ಸೇರಿಸಿ ಎಲ್ಲಾ ಸೃಷ್ಟಿಗಳೂ ಅರ್ಹರಾಗುತ್ತಾರೆ. ಧಿಕ್ಕಾರಿಗಳ ಪಾರತ್ರಿಕ ಜೀವನ ಮಾತ್ರ ಹೀನಾಯವಾಗಿರುತ್ತದೆ ಎಂಬುದನ್ನು ಖಚಿತವಾಗಿ ಹೇಳಿದನು,

قَالَ وَمَنْ كَفَرَ فَأُمَتِّعُهُ قَلِيلًا ثُمَّ أَضْطَرُّهُ إِلَىٰ عَذَابِ النَّارِ ۖ وَبِئْسَ الْمَصِيرُ

ಅವರ ಪ್ರಭುವು, "ನಾನು ಭೂಲೋಕದ ಅಲ್ಪಕಾಲದ ಜೀವನಾಧಾರವನ್ನು ಅವಿಶ್ವಾಸಿಗೂ ಕೊಡುವೆನು. ಆದರೆ ಆ ಮೇಲೆ ಅವನನ್ನು ನರಕಕ್ಕೆ ಕಳುಹಿಸುವೆನು. ಅದು ಅತ್ಯಂತ ನಿಕೃಷ್ಟ ನೆಲೆಯಾಗಿರುತ್ತದೆ" ಎಂದು ಉತ್ತರಿಸಿದನು.

(ಕುರ್‌ಆನ್:ಅಲ್‌ಬಕರಃ)

ತಮ್ಮ ಮುಂದಿನ ಪೀಳಿಗೆಯು ಏಕದೇವ ವಿಶ್ವಾಸದಲ್ಲಿ ಮುಂದುವರಿಯುವುದೋ? ಅವರಿಗೆ ಶಿಕ್ಷಣ ನೀಡುವವರು ಬೇಡವೇ? ಅವರು ನಮಾಝ್ ಸಂಸ್ಥಾಪಿಸುವರೇ? ಪಥಭ್ರಷ್ಟತೆಗೆ ಬಿದ್ದರೆ ಅವರ ಪರಲೋಕ ಜೀವನದ ಗತಿಯೇನು? ಎಂಬಿತ್ಯಾದಿ ಚಿಂತೆಗಳು ಲೋಕನಾಯಕರಾದ ಇಬ್ರಾಹೀಮ್(ಅ)ರನ್ನು ಸದಾ ಕಾಡುತ್ತಿದ್ದವು. ಹಾಗಾಗಿ ಅವರು ಜನರ ಲೌಕಿಕ ಸುಭಿಕ್ಷೆಗಾಗಿ ಮಾಡುವ ಪ್ರಾರ್ಥನೆಯೊಂದಿಗೆ ಅವರ ಆಧ್ಯಾತ್ಮಿಕ ಸುಧಾರಣೆಗಾಗಿಯೂ ವಿನಂತಿಸುತ್ತಿದ್ದರು.

رَبَّنَا إِنِّي أَسْكَنْتُ مِنْ ذُرِّيَّتِي بِوَادٍ غَيْرِ ذِي زَرْعٍ عِنْدَ بَيْتِكَ الْمُحَرَّمِ رَبَّنَا لِيُقِيمُوا
الصَّلَاةَ فَاجْعَلْ أَفْئِدَةً مِنَ النَّاسِ تَهْوِي إِلَيْهِمْ وَارْزُقْهُمْ مِنَ الثَّمَرَاتِ لَعَلَّهُمْ يَشْكُرُونَ

ಓ ನನ್ನ ಪ್ರಭೂ, ನಾನು ನನ್ನ ಸಂತತಿಯ ಒಂದು ಭಾಗವನ್ನು ಒಂದು ಬಂಜರು ಕಣಿವೆಯಲ್ಲಿ ನಿನ್ನ ಸನ್ಮಾನ್ಯಗೃಹದ ಬಳಿ ತಂದು ನೆಲೆಗೊಳಿಸಿದ್ದೇನೆ. ಓ ನನ್ನ ಪ್ರಭೂ, ಇವರು ನಮಾಝನ್ನು ಸಂಸ್ಥಾಪಿಸಲೆಂದು ಹೀಗೆ ಮಾಡಿದ್ದೇನೆ. ಆದುದರಿಂದ ನೀನು ಜನಮನಗಳು ಇವರ ಕಡೆಗೆ ಒಲಿಯುವಂತೆ ಮಾಡು ಮತ್ತು ಇವರಿಗೆ ತಿನ್ನಲು ಫಲಗಳನ್ನು ನೀಡು. ಇವರು ಕೃತಜ್ಞರಾಗಲೂಬಹುದು.

–(ಕುರ್‌ಆನ್–14:37)

ಅಲ್ಲಾಹನು ಕಅಬಾ ಭವನ ಮತ್ತು ಅದರ ಸುತ್ತಮುತ್ತಲ ಪ್ರದೇಶವನ್ನು ಇಂದಿನವರೆಗೂ ಸುಭಿಕ್ಷೆಯಿಂದ ಕಂಗೊಳಿಸುವಂತೆ ಮಾಡಿದ್ದಾನೆ. ಆ ಭವನವನ್ನು ಶಾಂತಿಯ ನೆಲೆಯಾಗಿಸಿದ್ದಾನೆ. ಅಲ್ಲಾಹನು ತನ್ನ ಈ ಅನುಗ್ರಹವನ್ನು ಕೂಡಾ ಜನರಿಗೆ ನೆನಪಿಸುತ್ತಾನೆ.

أَوَلَمْ نُمَكِّنْ لَهُمْ حَرَمًا آمِنًا يُجْبَىٰ إِلَيْهِ ثَمَرَاتُ كُلِّ شَيْءٍ رِزْقًا مِنْ لَدُنَّا وَلَٰكِنَّ أَكْثَرَهُمْ لَا يَعْلَمُونَ

ಎಲ್ಲ ತರದ ಹಣ್ಣುಹಂಪಲುಗಳು ನಮ್ಮ ಕಡೆಯಿಂದ ಜೀವನಾಧಾರವಾಗಿ ಹರಿದುಬರುವಂತಹ ಒಂದು ಶಾಂತಿಮಯ 'ಹರಮ್'(ಸನ್ಮಾನ್ಯಸ್ಥಳ) ಅನ್ನು ನಾವು ಇವರಿಗೆ ವಾಸಸ್ಥಾನವಾಗಿ ಮಾಡಿಲ್ಲವೇ? ಆದರೆ ಇವರಲ್ಲಿ ಹೆಚ್ಚಿನವರು ತಿಳಿಯುವುದಿಲ್ಲ (ಕುರ್‌ಆನ್–28:57)

ಅವರ ಎಲ್ಲಾ ಪ್ರಾರ್ಥನೆಗಳ ಪೈಕಿ ಅತ್ಯುತ್ತಮವಾದ ಪ್ರಾರ್ಥನೆಯೊಂದಿತ್ತು. ತಮ್ಮ ಜನರ ಪೈಕಿಯೇ ಭವಿಷ್ಯದಲ್ಲಿ ಒಬ್ಬ ಸಂದೇಶವಾಹಕ ಹುಟ್ಟಲಿ ಎಂಬ ಮಹದಾಸೆಯನ್ನು ಅವರು ಸೃಷ್ಟಿಕರ್ತನ ಮುಂದೆ ವ್ಯಕ್ತಪಡಿಸಿದರು. ಕಳಕಳಿಯ ವಿನಂತಿಯನ್ನು ತಮ್ಮ ಪ್ರಭುವಿನ ಮುಂದಿಟ್ಟರು.

رَبَّنَا وَابْعَثْ فِيهِمْ رَسُولًا مِنْهُمْ يَتْلُو عَلَيْهِمْ آيَاتِكَ وَيُعَلِّمُهُمُ

الْكِتَابَ وَالْحِكْمَةَ وَيُزَكِّيهِمْ ۚ إِنَّكَ أَنْتَ الْعَزِيزُ الْحَكِيمُ

ಓ ಪ್ರಭೂ, ಅವರಿಗೆ ನಿನ್ನ ವಚನಗಳನ್ನು ಪಠಿಸಿ ಹೇಳುವ ಮತ್ತು ಗ್ರಂಥವನ್ನೂ ಯುಕ್ತಿಯನ್ನೂ ಬೋಧಿಸುವ ಹಾಗೂ ಅವರ ಜೀವನವನ್ನು ಸಂಸ್ಕರಿಸುವ ಓರ್ವ ಸಂದೇಶವಾಹಕನನ್ನು ಅವರೊಳಗಿಂದಲೇ ನಿಯೋಜಿಸು. ನೀನು ಮಹಾಪ್ರತಾಪಿಯೂ ಯುಕ್ತಿಪೂರ್ಣನೂ ಆಗಿರುತ್ತೀಯೆ. (ಕುರ್‌ಆನ್–2:129)

ಶತಮಾನಗಳ ನಂತರ ಈ ಪ್ರಾರ್ಥನೆಯ ಫಲ ವ್ಯಕ್ತವಾಯಿತು. ಅಂದಿನವರೆಗೂ ಕಳುಹಿಸಲ್ಪಟ್ಟ ಪ್ರವಾದಿಗಳ ಸರದಾರರ ಜನನವಾಯಿತು.

ಮಕ್ಕಾ ಪಟ್ಟಣವೇ ಸನ್ಮಾನ್ಯವಾಗಿ ಬಿಟ್ಟಿತು. ಲೋಕಾನುಗ್ರಹಿ ಪ್ರವಾದಿ ಮುಹಮ್ಮದ್(ಸ)ರ ಆಗಮನದಿಂದ ಮನುಕುಲದ ವಿಮೋಚನೆಯ ಸುವರ್ಣ ಕಾಲ ಪ್ರಾರಂಭವಾಗಿಬಿಟ್ಟಿತು.

ಅಲ್ಲಾಹನು ತನ್ನ ಮಿತ್ರರಾದ ಇಬ್ರಾಹೀಮ್‌ರನ್ನು ಅದೆಷ್ಟೋ ಬಾರಿ ಕುರ್‌ಆನಿನಲ್ಲಿ ಅತ್ಯಧಿಕ ಗೌರವದೊಂದಿಗೆ ಪ್ರಸ್ತಾಪಿಸಿದ್ದಾನೆ. ಮತ್ತು 'ಕಅಬಾ' ಭವನದ ಬಳಿ ಮಕಾಮು ಇಬ್ರಾಹೀಮ್' (ಇಬ್ರಾಹೀಮರ ಸ್ಥಾನ) ಒಂದಿದೆ ಎಂದು ಹೇಳಿ ಅವರ ಘನತೆಯನ್ನು ಉನ್ನತಗೊಳಿಸಿದ್ದಾನೆ,

فِيهِ آيَاتٌ بَيِّنَاتٌ مَقَامُ إِبْرَاهِيمَ

ಅದರಲ್ಲಿ ಸುವ್ಯಕ್ತ ಕುರುಹುಗಳಿವೆ. 'ಮಕಾಮು ಇಬ್ರಾಹೀಮ್' (ಇಬ್ರಾಹೀಮರು ದೇವಾರಾಧನೆಗಾಗಿ ನಿಂತ ಸ್ಥಾನ) ಇದೆ. (ಕುರ್‌ಆನ್–3:97)

ಇನ್ನೊಂದೆಡೆ ಈ ಮಕಾಮು ಇಬ್ರಾಹೀಮ್‌ನ ಬಳಿ ನಮಾಝ್ ಮಾಡುವ ಆದೇಶ ನೀಡಿದ್ದಾನೆ.

وَاتَّخِذُوا مِنْ مَقَامِ إِبْرَاهِيمَ مُصَلًّى

"ಇಬ್ರಾಹೀಮರು ಆರಾಧನೆಗಾಗಿ ನಿಲ್ಲುವ ಸ್ಥಾನವನ್ನು ನೀವು ಸ್ಥಿರವಾದ ನಮಾಝಿನ ತಾಣವನ್ನಾಗಿಸಿಕೊಳ್ಳಿರಿ"

(ಕುರ್‌ಆನ್–2:125)

ಈ ಮಕಾಮು ಇಬ್ರಾಹೀಮ್' ಎಂಬುದು ಸ್ವಲ್ಪ ಎತ್ತರದ ಒಂದು ದೊಡ್ಡ ಕಲ್ಲು. ಕಅಬಾ ಭವನದ ನಿರ್ಮಾಣದ ವೇಳೆ ಇಸ್ಮಾಈಲ್(ಅ) ಕಟ್ಟಡಕ್ಕೆ ಬೇಕಾದ ಕಲ್ಲುಗಳನ್ನು ತಂದು ಕೊಡುತ್ತಿದ್ದರು ಮತ್ತು ಇಬ್ರಾಹೀಮ್(ಅ) ಭವನದ ನಿರ್ಮಾಣದಲ್ಲಿ ತೊಡಗಿದ್ದರು. ಅದರ ಗೋಡೆಗಳು ಒಂದಿಷ್ಟು ಎತ್ತರಕ್ಕೆ ನಿರ್ಮಿಸಲ್ಪಟ್ಟಾಗ ಕೆಳಗೆ ನಿಂತು ನಿರ್ಮಾಣವನ್ನು ಮುಂದುವರಿಸಲು ಅಸಾಧ್ಯವಾಯಿತು. ಆಗ ಇಸ್ಮಾಈಲ್(ಅ)ರು ಆ ಪ್ರಸಿದ್ಧ ಕಲ್ಲನ್ನು ತಂದು, ಗೋಡೆಗೆ ವಾಲಿಸಿಟ್ಟು ನಿರ್ಮಾಣವನ್ನು ಮುಂದುವರಿಸಿದ್ದರು ಎಂದು ಇಬ್ನ್‌ಅಬ್ಬಾಸ್(ರ) ವರದಿ ಮಾಡಿರುವ ಒಂದು ಸುದೀರ್ಘವಾದ ಹದೀಸಿನಿಂದ ತಿಳಿಯಬಹುದು. (ಸಹೀಹ್ ಬುಖಾರಿ ಕಿತಾಬುಲ್ ಅಂಬಿಯಾ.)

ಉಮರ್(ರ)ರವರ ಆಡಳಿತ ಕಾಲದ ವರೆಗೂ ಆ ಕಲ್ಲು ಅದರ ಸ್ಥಾನದಲ್ಲೇ ಇತ್ತು. ಅಲ್ಲಿ ನಮಾಝ್ ಮಾಡಲು ಜನರು ನಿಂತುಕೊಳ್ಳುತ್ತಿರುವಾಗ ತವಾಫ್

ಮಾಡುವವರಿಗೆ ಅಡಚಣೆ ಆಗುತ್ತಿದೆ ಎಂದು ಕಂಡು ಕೊಂಡ ಉಮರ್ ಆ ಕಲ್ಲನ್ನು ಅಲ್ಲಿಂದ ಸರಿಸಿ ಸ್ವಲ್ಪ ದೂರ ಇರಿಸಿದ್ದರು. ಇದರಿಂದ ಮಕಾಮು ಇಬ್ರಾಹೀಮ್‌ನ ಬಳಿ ನಮಾಝ್ ಮಾಡುವವರಿಗೂ ಕಅಬಾ ಭವನದ ತವಾಫ್ ಮಾಡುವವರಿಗೂ ಅನುಕೂಲವಾಯಿತು.

(ತಫ್ಸೀರ್ ಇಬ್ನ್ ಕಸೀರ್– ಟಿಪ್ಪಣಿ – ಸೂರಃ ಆಲಿ ಇಮ್ರಾನ್ : ಸೂಕ್ತ 97.)

ಇನ್ನು ಅಲ್ಲಾಹನ ಆ ಪವಿತ್ರ ಭವನದೆಡೆಗೆ ಹಜ್ಜ್ ಯಾತ್ರೆ ಕೈಗೊಳ್ಳಬೇಕೆಂಬ ಸಾರ್ವತ್ರಿಕ ಕರೆಕೊಡುವ ಗೌರವದ ಹೊಣೆಗಾರಿಕೆಯನ್ನೂ ಆತನು ಇಬ್ರಾಹೀಮ್(ಅ)ರಿಗೆ ವಹಿಸಿಕೊಟ್ಟನು.

وَأَذِّنْ فِي النَّاسِ بِالْحَجِّ يَأْتُوكَ رِجَالًا وَعَلَىٰ كُلِّ ضَامِرٍ يَأْتِينَ مِنْ كُلِّ فَجٍّ عَمِيقٍ

لِيَشْهَدُوا مَنَافِعَ لَهُمْ وَيَذْكُرُوا اسْمَ اللَّهِ فِي أَيَّامٍ مَعْلُومَاتٍ عَلَىٰ مَا رَزَقَهُمْ مِنْ

بَهِيمَةِ الْأَنْعَامِ ۖ فَكُلُوا مِنْهَا وَأَطْعِمُوا الْبَائِسَ الْفَقِيرَ

ಮತ್ತು ಜನರಿಗೆ ಹಜ್ಜ್ ಯಾತ್ರೆಗಾಗಿ ಸಾರ್ವತ್ರಿಕ ಕರೆ ನೀಡಿರಿ. ಅವರು ದೂರ ದೂರದ ಪ್ರದೇಶಗಳಿಂದೆಲ್ಲ ಕಾಲ್ನಡಿಗೆಯಲ್ಲೂ ಒಂಟೆಗಳ ಮೇಲೆ ಸವಾರಿ ಮಾಡಿಕೊಂಡೂ ಬರುವರು. (ಈರೀತಿ) ಅವರು ಇಲ್ಲಿ ಅವರಿಗಾಗಿ ಇರಿಸಲಾಗಿರುವ ಪ್ರಯೋಜನಗಳನ್ನು ಪ್ರತ್ಯಕ್ಷವಾಗಿ ನೋಡುವಂತಾಗಲಿ ಮತ್ತು ಅವರು ಕೆಲವು ನಿಶ್ಚಿತ ದಿನಗಳಲ್ಲಿ ಅಲ್ಲಾಹನು ಅವರಿಗೆ ದಯಪಾಲಿಸಿರುವ ಜಾನುವಾರುಗಳ ಮೇಲೆ ಅವನ ನಾಮವನ್ನುಚ್ಚರಿಸಲಿ. ಸ್ವತಃ ತಿನ್ನಲಿ ಮತ್ತು ಬಡಬಗ್ಗರಿಗೂ ಕೊಡಲಿ.

–(ಕುರ್‌ಆನ್–22:27,28)

ಹಜ್ಜ್ ಯಾತ್ರೆ ಕೈಗೊಳ್ಳಬೇಕು ಎಂಬ ಭಾದತೆಯನ್ನು ಕೂಡಾ ಸತ್ಯವಿಶ್ವಾಸಿಗಳಿಗೆ ಮನದಟ್ಟು ಮಾಡಲಾಯಿತು.

وَلِلَّهِ عَلَى النَّاسِ حِجُّ الْبَيْتِ مَنِ اسْتَطَاعَ إِلَيْهِ سَبِيلًا ۚ وَمَنْ كَفَرَ فَإِنَّ اللَّهَ غَنِيٌّ عَنِ الْعَالَمِينَ

ಈ ಭವನದ ವರೆಗೆ ತಲಪಲು ಸಾಧನಾನುಕೂಲತೆಗಳಿರುವವನು ಅದರ 'ಹಜ್ಜ್' ಯಾತ್ರೆ ಕೈಗೊಳ್ಳಬೇಕೆಂಬುದು ಜನರ ಮೇಲೆ ಅಲ್ಲಾಹನ ಹಕ್ಕಾಗಿರುತ್ತದೆ. ಈ ಆಜ್ಞೆಯ ಅನುಸರಣೆಯನ್ನು ಯಾರಾದರೂ ನಿರಾಕರಿಸಿದರೆ, ಅಲ್ಲಾಹ್ ಸಕಲ ಜಗತ್ತಿನವರಿಂದ ನಿರಪೇಕ್ಷನಾಗಿರುತ್ತಾನೆಂಬುದನ್ನು ಅವನು ಅರಿತಿರಬೇಕು.

(ಕುರ್‌ಆನ್–3:97)

## ಆಕಾಶಗಳಲ್ಲೂ ಕಅಬಾ ಭವನ ಇದೆಯೇ?

ಭೂಮಿಯಲ್ಲಿ ಪವಿತ್ರ ಕಅಬಾ ಭವನ ಇದ್ದಂತೆ ಆಕಾಶದಲ್ಲೂ ಒಂದಿದೆ ಮತ್ತು ಪ್ರತಿದಿನ ಎಪ್ಪತ್ತು ಸಾವಿರ ದೇವಚರರು ಅದರ 'ತವಾಫ್' ಮಾಡುತ್ತಾರೆ. ಕುರ್‌ಆನಿನಲ್ಲಿ ಪ್ರಸ್ತಾಪಿಸಲಾದ ಬೈತುಲ್ ಮಅಮೂರ್ ಎಂಬ ಭವನ ಈ ಆಕಾಶದ ಭವನವೇ ಆಗಿದೆ ಎಂದು ಹೇಳಲಾಗುತ್ತದೆ.

(ಕಸಸುಲ್ ಅಂಬಿಯಾ – ಇಬ್ನ್ ಕಸೀರ್-ಅಧ್ಯಾಯ ಇಬ್ರಾಹೀಮ್)

ಬೈತುಲ್ ಮಅಮೂರ್ ಅಂದರೆ 'ಆಗಾಗ ಭೇಟಿ ನೀಡಲ್ಪಡುವ ಮನೆ' ಅಥವಾ 'ತುಂಬಿದ ಮನೆ' ಎಂದಾಗಿದೆ. ಬೈತುಲ್ ಮಅಮೂರ್‌ನ ಬಗ್ಗೆ ಮೌಲಾನಾ ಮೌದೂದಿಯವರ ಟಿಪ್ಪಣಿ ಹೀಗಿದೆ–

ಬೈತುಲ್ ಮಅಮೂರ್ ಯಾವುದು ಎಂಬುದರ ಬಗ್ಗೆ ಹಸನ್ ಬಸ್ರಿಯವರ ಅಭಿಪ್ರಾಯವೇನೆಂದರೆ ಅದು ಮಕ್ಕಾದಲ್ಲಿರುವ ಭವನವೇ ಆಗಿದೆ. ಅದು ಸದಾ ಜನರಿಂದ ತುಂಬಿರುವುದರಿಂದ ಮತ್ತು ದಿನ ರಾತ್ರಿ ಲೆಕ್ಕಿಸದೆ ಪದೇ ಪದೇ ಜನರು ಅದರ ಬಳಿ ಬರುವುದರಿಂದ ಅದನ್ನು ಬೈತುಲ್ ಮಅಮೂರ್ ಎಂದು ಕರೆಯಲಾಗಿದೆ. ಆದರೆ ಅಲಿ, ಇಬ್ನ್ ಅಬ್ಬಾಸ್, ಇಕ್ರಿಮಃ, ಮುಜಾಹಿದ್, ಕತಾದ, ದಹ್ಹಾಕ್, ಇಬ್ನ್‌ರ್ಝೈದ್ ಮುಂತಾದವರು ಇದನ್ನು ಪ್ರವಾದಿ ಮುಹಮ್ಮದ್(ಸ) ತಮ್ಮ ಮಿ'ಅರಾಜ್‌ನ ರಾತ್ರಿಯಲ್ಲಿ ಇಬ್ರಾಹೀಮ್(ಅ) ಒರಗಿ ಕೂತು ಕೊಂಡಿದ್ದ ಒಂದು ಭವನದ ಕುರಿತು ಪ್ರಸ್ತಾಪಿಸಿರುವುದಾಗಿಯೂ ಇದು ಅದೇ ಭವನವಾಗಿರಬೇಕೆಂದೂ ಅಭಿಪ್ರಾಯ ಪಟ್ಟಿದ್ದಾರೆ. ಮುಂದುವರಿದು ಮುಜಾಹಿದ್, ಕತಾದ, ಮತ್ತು ಇಬ್ನ್‌ರ್ಝೈದ್ ಭೂಮಿಯ ಮೇಲೆ ಅಲ್ಲಾಹನ ಆರಾಧನೆಗೆ ಒಂದು ಕೇಂದ್ರ ಸ್ಥಾನವಿದ್ದಂತೆಯೇ ಎಲ್ಲಾ ಆಕಾಶಗಳಲ್ಲೂ ಅಲ್ಲಿ ಅಲ್ಲಾಹನ ಆರಾಧಕರಿಗಾಗಿ ಒಂದೊಂದು ಭವನ ಇದೆ ಮತ್ತು ಅವುಗಳಲ್ಲಿ ಒಂದರ ಬಳಿ ಇಬ್ರಾಹೀಮ್(ಅ) ಒರಗಿ ಕೂತಿರುವುದನ್ನು ಮುಹಮ್ಮದ್(ಸ)ರು ಕಂಡಿದ್ದರು ಎಂದಿದ್ದಾರೆ. ಇಬ್ರಾಹೀಮ್(ಅ)ರು ಈ ಭೂಮಿಯ ಕಅಬಾ ಭವನದ ಸ್ಥಾಪಕರಾಗಿರುವ ಕಾರಣ ಅವರಿಗೆ ಆಕಾಶದಲ್ಲಿರುವ ಆ ಭವನದೊಡನೆ ವಿಶೇಷ ಬಾಂಧವ್ಯ ಇರುವುವದರಿಂದಲೇ ಹೀಗೆ ಕಾಣ ಸಿಕ್ಕಿದರು ಎಂದು ಕೂಡ ಅವರು ಹೇಳುತ್ತಾರೆ. ಈ ಎರಡು ಅಭಿಪ್ರಾಯಗಳನ್ನು ಮುಂದಿಟ್ಟರೆ ಬೈತುಲ್ ಮ'ಅಮೂರ್ ಎಂಬುದು ಈ ಭೂಮಿ ಮತ್ತು ಆಕಾಶಗಳೆರಡರಲ್ಲೂ ಇರುವ ಭವನಗಳ ಪ್ರಸ್ತಾಪ ಎಂದು ಸ್ಪಷ್ಟವಾಗುತ್ತದೆ.

(ತಫ್ಹೀಮುಲ್ ಕುರ್‌ಆನ್ – ಸೂರಃ ಅತ್ತೂರ್ –ಟಿಪ್ಪಣಿ 3.)



# ಅಲ್ಲಾಹನ ಮಿತ್ರರ ಇಹಲೋಕ ವಿದಾಯ

ಇಬ್ರಾಹೀಮ್(ಅ) ಮತ್ತು ಅವರ ಪತ್ನಿಯಂದಿರು ಇಹಲೋಕದಿಂದ ವಿದಾಯ ಹೇಳಿದ ಕಾಲದ ಬಗ್ಗೆ ಕುರ್‌ಆನಿನಲ್ಲಿ ಯಾವ ಮಾಹಿತಿಯನ್ನೂ ನೀಡಲಾಗಿಲ್ಲ. ಬೈಬಲಿನಲ್ಲಿ ಕೆಲವೊಂದು ಮಾಹಿತಿಗಳು ಲಭ್ಯವಿದೆ. ಸಾರಾ ನೂರ ಇಪ್ಪತ್ತೇಳು ವರ್ಷದವರಿದ್ದಾಗ ಅವರ ನಿಧನವಾಯಿತು. ಹೆಬ್ರಾನ್ ಪಟ್ಟಣದ ಒಬ್ಬ ವ್ಯಕ್ತಿಯಿಂದ ಒಂದು ಜಮೀನು ಖರೀದಿಸಲಾಯಿತು ಮತ್ತು ಅದರ ಒಂದು ಗುಹೆಯಲ್ಲಿ ಅವರನ್ನು ದಫನ ಮಾಡಲಾಯಿತು ಎಂದು ಬೈಬಲ್ ಹೇಳುತ್ತದೆ. (ಆದಿಕಾಂಡ23–2)

ಇಬ್ನ್ಅಬ್ಬಾಸ್(ರ)ರ ಒಂದು ವರದಿಯ ಪ್ರಕಾರ ಇಸ್ಮಾಈಲ್(ಅ)ರ ವಿವಾಹವಾಗಿ ಸ್ವಲ್ಪ ಕಾಲದಲ್ಲೇ ಹಾಜಿರಾ(ಅ)ರ ನಿಧಾನವಾಗಿತ್ತು.

(ಸಹೀಹ್ ಬುಖಾರಿ – ಕಿತಾಬುಲ್ ಅಂಬಿಯಾ.)

ಹಾಜಿರಾ(ರ) ಮತ್ತು ಸಾರಾ(ರ)ರ ನಿಧನದ ನಂತರ ಇಬ್ರಾಹೀಮ್(ಅ) ಪುನಃ ವಿವಾಹವಾಗಿದ್ದರು ಮತ್ತು ಅವರಿಗೆ ಆ ವಿವಾಹದಿಂದ ಆರು ಮಕ್ಕಳು ಹುಟ್ಟಿದ್ದರು ಎಂದು ಬೈಬಲ್ ಹೇಳುತ್ತದೆ. (ಆದಿಕಾಂಡ – 25: 1,2.)

ಪುರಾತನ ಇತಿಹಾಸಕಾರರು ಇಬ್ರಾಹೀಮ್(ರ)ರಿಗೆ ಮತ್ತೊಂದು ಪತ್ನಿ ಇದ್ದು ಅವರಲ್ಲಿ ಐದು ಮಕ್ಕಳಿದ್ದರು ಎಂದು ವರದಿ ಮಾಡಿದ್ದಾರೆ ಎಂಬುದು ಇಬ್ನ್ ಕಸೀರ್‌ರ ಅಭಿಪ್ರಾಯ.

(ಅಲ್ ಬಿದಾಯ ವನ್ನಿಹಾಯ – ಇಬ್ನ್ ಕಸೀರ್, ಭಾಗ1– ಕಿಸ್ಸತು ಇಬ್ರಾಹೀಮ್ ಅಲ್ ಖಲೀಲ್.)

ಹೀಗೆ ಅಲ್ಲಾಹನ ಇಷ್ಟ ದಾಸನ ದೌತ್ಯವು ಮುಗಿಯಿತು. ಆತನ ಪ್ರೀತಿ ಪಾತ್ರರಾದ ಈ ಮಹಾನ್ ಸಂದೇಶವಾಹಕರು ತಮಗೆ ನೀಡಲ್ಪಟ್ಟ ಸರ್ವ ಕರ್ತವ್ಯಗಳನ್ನೂ ಪೂರೈಸಿಬಿಟ್ಟರು. ಸೃಷ್ಟಕರ್ತನ ಋಣವನ್ನು ಸಂಪೂರ್ಣವಾಗಿ ಮುಗಿಸಿದರು. ಅಲ್ಲಾಹನು ಅವರ ಈ ಗುಣವನ್ನು ಬಹಳಷ್ಟು ಕೊಂಡಾಡುತ್ತಾನೆ,

وَإِبْرَاهِيمَ الَّذِي وَفَّىٰ

**ಮತ್ತು ನಿಷ್ಠೆಯ ಋಣ ತೀರಿಸಿದ ಇಬ್ರಾಹೀಮ್**

**(ಕುರ್‌ಆನ್53:37)**

ಕೊನೆಗೆ ಅಲ್ಲಾಹನ ಪ್ರಿಯ ಮಿತ್ರರಾದ ಖಲೀಲುಲ್ಲಾಹ್ ಇಬ್ರಾಹೀಮ್(ಅ)ರು ಇಹಲೋಕಕ್ಕೆ ವಿದಾಯ ಹೇಳುವ ಗಳಿಗೆ ಬಂತು. (ಆಗ ಅವರಿಗೆ ನೂರ ಎಪ್ಪತ್ತೈದು ವರ್ಷ ವಯಸ್ಸಾಗಿತ್ತೆಂದು ಬೈಬಲ್ ಹೇಳುತ್ತದೆ.)

ಸಾರಾ(ರ)ರನ್ನು ದಫನ ಮಾಡಲಾದ ಹೆಬ್ರಾನ್ ಪಟ್ಟಣದ ಅದೇ ಭೂಮಿಯಲ್ಲಿ ಇಬ್ರಾಹೀಮ್(ಅ)ರನ್ನೂ ದಫನ ಮಾಡಲಾಯಿತು. ಅವರ ದಫನ ಕಾರ್ಯವನ್ನು ಅವರ ಇಬ್ಬರು ಪುತ್ರರಾದ ಇಸ್ಮಾಈಲ್(ಅ) ಮತ್ತು ಇಸ್ಹಾಕ್(ಅ) ನೆರವೇರಿಸಿದರು. ಇಸ್ಮಾಈಲ್(ಅ), ಇಸ್ಹಾಕ್(ಅ) ಮತ್ತು ಯಾಕೂಬ್(ಅ)ರ ಸಮಾಧಿಗಳು ಕೂಡಾ ಹೆಬ್ರಾನ್ನನ ಅದೇ ಜಮೀನಿನಲ್ಲಿದೆ.

ಹೆಬ್ರಾನ್ ಪಟ್ಟಣ, ಇಂದಿನ ಫೆಲಸ್ತೀನಿನಲ್ಲಿ, ಜೆರುಸಲೇಮ್‌ನ ದಕ್ಷಿಣ ಭಾಗದಲ್ಲಿದೆ. ಈ ನಗರವು ಇಂದು ಶೆಹರ್ ಅಲ್–ಖಲೀಲ್ (ಖಲೀಲ್‌ನಗರ) ಎಂದೇ ಪ್ರಸಿದ್ಧವಾಗಿದೆ.

□

# ಇಬ್ರಾಹೀಮ್(ಅ)ರ ಆದರ್ಶ ಬದುಕು

ಇಬ್ರಾಹೀಮ್(ಅ)ರ ಹೆಸರು ಕೇಳಿದೊಡನೆ ಒಂದು ಸಂಪೂರ್ಣ ನಾಗರಿಕತೆಯ ಉಗಮ ಮತ್ತು ಅದರ ಉತ್ತುಂಗತೆಯ ವಿಜಯಗಾಥೆಯು ಕಣ್ಣಮುಂದೆ ಬರುತ್ತದೆ. ಅವರು ದೃಢ ವಿಶ್ವಾಸ, ಅನುಪಮ ತ್ಯಾಗ, ಎಣೆಯಿಲ್ಲದ ಬದ್ಧತೆ ಮತ್ತು ಅಪಾರವಾದ ತಾಳ್ಮೆಯ ಒಡೆಯರು. ಬದುಕಿನುದ್ದಕ್ಕೂ ಅನೇಕ ಕಷ್ಟಕಾರ್ಪಣ್ಯಗಳ ಮಹಾಪೂರವನ್ನೇ ಎದುರಿಸಿ ಅವುಗಳನ್ನೆಲ್ಲಾ ಜಯಿಸಿ ವಿಜಯಶಾಲಿಯಾಗಿ ಹೊರಹೊಮ್ಮಿದವರು. ಸೃಷ್ಟಿಕರ್ತನು ಅವರಿಗೆ ನೀಡಿದ ಸರ್ವ ರೀತಿಯ ಪರೀಕ್ಷೆಗಳಲ್ಲಿ ಪೂರ್ಣ ಅಂಕಗಳನ್ನು ಪಡೆದ ಅಜೇಯರು.

ಇಬ್ರಾಹೀಮ್(ಅ)ರ ಮಾದರಿಯು ಪ್ರವಾದಿ ಮುಹಮ್ಮದ್(ಸ)ರಿಗೆ ಮತ್ತು ನಮಗೆಲ್ಲರಿಗೂ ಮಾರ್ಗದರ್ಶನವಾಗಬೇಕೆಂದು ಪವಿತ್ರ ಕುರ್‌ಆನ್ ತಾಕೀತು ಮಾಡಿದೆ,

قَدْ كَانَتْ لَكُمْ أُسْوَةٌ حَسَنَةٌ فِي إِبْرَاهِيمَ

"ನಿಮಗೆ ಇಬ್ರಾಹೀಮ್(ಅ) ಮತ್ತು ಅವರ ಸಂಗಾತಿಗಳಲ್ಲಿ ಒಂದು ಉತ್ತಮ ಆದರ್ಶವಿದೆ" (ಕುರ್‌ಆನ್– 60:4)

ಆ ಆದರ್ಶವನ್ನು ಕಡೆಗಣಿಸಬಾರದೆಂದು ಕೂಡಾ ಪವಿತ್ರ ಕುರ್‌ಆನ್ ಹೇಳುತ್ತದೆ,

لَقَدْ كَانَ لَكُمْ فِيهِمْ أُسْوَةٌ حَسَنَةٌ لِمَنْ كَانَ يَرْجُو اللَّهَ وَالْيَوْمَ الْآخِرَ ۚ وَمَنْ

يَتَوَلَّ فَإِنَّ اللَّهَ هُوَ الْغَنِيُّ الْحَمِيدُ

"ನಿಮಗೆ (ಪ್ರವಾದಿ ಮುಹಮ್ಮದ್) ಮತ್ತು ಅಲ್ಲಾಹನಲ್ಲೂ ಪುನರುತ್ಥಾನ ದಿನದಲ್ಲೂ ನಿರೀಕ್ಷೆ ಇರಿಸುವ ಪ್ರತಿಯೊಬ್ಬನಿಗೆ ಅವರ (ಇಬ್ರಾಹೀಮ್(ಅ) ಮತ್ತು ಅವರ ಸಂಗಾತಿಗಳ) ಚರ್ಯೆಯಲ್ಲಿ ಉತ್ತಮ ಆದರ್ಶವಿದೆ. ಯಾರಾದರೂ ಇದರಿಂದ ವಿಮುಖರಾದರೆ ಅಲ್ಲಾಹನು ನಿರಪೇಕ್ಷನೂ ಸ್ವಯಂ ಪ್ರಶಂಸಾರ್ಹನೂ ಆಗಿರುತ್ತಾನೆ.

(ಕುರ್‌ಆನ್– 60:6)

ಅವರ ಮಾದರಿಯು ಪುನರುತ್ಥಾನ ದವರೆಗೂ ಪ್ರಸ್ತುತವಾಗುವಂತೆ ಪವಿತ್ರ ಕುರ್‌ಆನಿನಲ್ಲಿ ಇಪ್ಪತ್ತೈದು ಬಾರಿ ಅವರ ಹೆಸರು ಬಂದಿದೆ ಮತ್ತು ಸುಮಾರು ಎಪ್ಪತ್ತಕ್ಕೂ ಹೆಚ್ಚು ಸೂಕ್ತಗಳಲ್ಲಿ ಅವರ ಪ್ರಸ್ತಾಪ ಬಂದಿದೆ.

ಇಬ್ರಾಹೀಮ್(ಅ)ರೊಂದಿಗೆ ತಮಗೆ ಬಹಳ ನಿಕಟ ಸಂಬಂಧವಿದೆ, ಅವರು ನಮ್ಮ ಪ್ರವಾದಿ ಎಂದು ಬೀಗುವ ಅದೆಷ್ಟೋ ಮುಸ್ಲಿಮರು ಇಂದು ಜಗತ್ತಿನಲ್ಲಿರಬಹುದು. ಅವರೆಲ್ಲರೂ ಒಂದು ವಿಷಯವನ್ನು ನೆನಪಿಟ್ಟುಕೊಳ್ಳಬೇಕು, ಇಬ್ರಾಹೀಮ್(ಅ)ರೊಂದಿಗಿನ ನಂಟಿನ ಬಗ್ಗೆ ಹೆಮ್ಮೆ ಪಡುವವರು ವಾಸ್ತವದಲ್ಲಿ ಅವರ ಆದರ್ಶವನ್ನು ತಮ್ಮ ಜೀವನದಲ್ಲಿ ಅಳವಡಿಸಲು ಸರ್ವ ರೀತಿಯಲ್ಲಿ ಪ್ರಯತ್ನಿಸಬೇಕಾಗಿದೆ.

إِنَّ أَوْلَى النَّاسِ بِإِبْرَاهِيمَ لَلَّذِينَ اتَّبَعُوهُ وَهَٰذَا النَّبِيُّ وَالَّذِينَ آمَنُوا ۗ وَاللَّهُ وَلِيُّ الْمُؤْمِنِينَ

ನಿಶ್ಚಯವಾಗಿಯೂ ಇಬ್ರಾಹೀಮರೊಂದಿಗೆ ಸಂಬಂಧವಿರಿಸಿಕೊಳ್ಳಲು ಎಲ್ಲರಿಗಿಂತಲೂ ಅಧಿಕ ಹಕ್ಕು ಸಲ್ಲುವುದಿದ್ದರೆ, ಅದು ಅವರನ್ನು ಅನುಸರಿಸಿದವರಿಗೆ

(ಮಾತ್ರ). ಮತ್ತು ಈಗ ಈ ಪ್ರವಾದಿ (ಅನುಸರಣೆ ಮಾಡುವವರು) ಹಾಗೂ ಇವರನ್ನು ಮಾನ್ಯ ಮಾಡುವವರು, ಈ ವಿಷಯದಲ್ಲಿ ಅಧಿಕ ಹಕ್ಕುದಾರರು. ಅಲ್ಲಾಹ್ ಸತ್ಯದ ಮೇಲೆ ವಿಶ್ವಾಸವಿಟ್ಟವರಿಗೆ ಮಾತ್ರ ಸಹಾಯಕನಾಗಿರುತ್ತಾನೆ.

(ಕುರ್‌ಆನ್– 3:68)

## ಇಬ್ರಾಹೀಮ್(ಅ)ರ ಶ್ರೇಷ್ಠತೆ

ಇಬ್ರಾಹೀಮ್(ಅ)ರಿಗೆ ಅಲ್ಲಾಹನಿಂದ ದೊರಕಿದ ಶ್ರೇಷ್ಠವಾದ ಸ್ಥಾನಮಾನವನ್ನು ಕೆಲವೊಂದು ಪದಗಳಿಂದ ಬಣ್ಣಿಸಲು ಖಂಡಿತವಾಗಿಯೂ ಸಾಧ್ಯವಿಲ್ಲ. ಅವರು ಸೃಷ್ಟಿಕರ್ತನ ಅತಿಪ್ರಿಯರಾದ ದಾಸ. ಅವರನ್ನು ಪವಿತ್ರ ಕುರ್‌ಆನ್ ಅದೆಷ್ಟೋ ಬಾರಿ ಪ್ರಶಂಸಿದೆ. ಅಲ್ಲಾಹನು ಅವರನ್ನು ಬಹಳಷ್ಟು ಕೊಂಡಾಡಿದ್ದಾನೆ,

إِنَّ إِبْرَاهِيمَ كَانَ أُمَّةً قَانِتًا لِلَّهِ حَنِيفًا وَلَمْ يَكُ مِنَ الْمُشْرِكِينَ. شَاكِرًا لِأَنْعُمِهِ اجْتَبَاهُ

وَهَدَاهُ إِلَىٰ صِرَاطٍ مُسْتَقِيمٍ. وَآتَيْنَاهُ فِي الدُّنْيَا حَسَنَةً وَإِنَّهُ فِي الْآخِرَةِ لَمِنَ الصَّالِحِينَ

ವಾಸ್ತವದಲ್ಲಿ ಇಬ್ರಾಹೀಮ್(ಅ) ಸ್ವಯಂ ತಾನೇ ಒಂದು ಸಮುದಾಯವಾಗಿದ್ದರು. ಅಲ್ಲಾಹನ ಆಜ್ಞಾನುಸಾರಿ ಮತ್ತು ಏಕನಿಷ್ಠ(ರಾಗಿದ್ದರು.) ಅವರೆಂದೂ 'ಬಹುದೇವವಿಶ್ವಾಸಿ' ಆಗಿರಲಿಲ್ಲ. ಅಲ್ಲಾಹನ ಕೊಡುಗೆಗಳಿಗೆ ಕೃತಜ್ಞತೆ ಸಲ್ಲಿಸುವವರಾಗಿದ್ದರು. ಅಲ್ಲಾಹನು ಅವರನ್ನು ಆಯ್ದುಕೊಂಡನು ಮತ್ತು ನೇರಮಾರ್ಗವನ್ನು ತೋರಿಸಿದನು. ನಾವು ಇಹಲೋಕದಲ್ಲಿ ಅವರಿಗೆ ಒಳಿತನ್ನು ದಯಪಾಲಿಸಿದೆವು ಮತ್ತು ಪರಲೋಕದಲ್ಲಿ ಅವರು ನಿಶ್ಚಯವಾಗಿಯೂ ಸಜ್ಜನರಲ್ಲಾಗಿರುವರು. (ಕುರ್‌ಆನ್– 16:120–122)

ನಾಲ್ಕು ಪೀಳಿಗೆಗಳಲ್ಲಿ ನಿರಂತರವಾಗಿ ಪ್ರವಾದಿಗಳು ಹುಟ್ಟಿ ಬಂದಿರುವ ಔನ್ನತ್ಯ ಕೇವಲ ಪ್ರವಾದಿ ಇಬ್ರಾಹೀಮ್(ಅ)ರ ಪೀಳಿಗೆಗೆ ಲಭ್ಯವಾಗಿದೆ. ಅವರು ಸ್ವತಃ ಪ್ರವಾದಿಯಾಗಿದ್ದು ಅವರ ಇಬ್ಬರು ಪುತ್ರರಾದ ಇಸ್ಮಾಈಲ್(ಅ) ಮತ್ತು ಇಸ್ಹಾಕ್(ಅ) ಕೂಡಾ ಪ್ರವಾದಿಗಳಾಗಿದ್ದರು. ಇಸ್ಹಾಕ್(ಅ)ರ ಪುತ್ರರಾದ ಯಾಕೂಬ್(ಅ)ರಿಗೂ ತದನಂತರ ಅವರ ಪುತ್ರರಾದ ಯೂಸುಫ್(ಅ)ರಿಗೂ ಪ್ರವಾದಿತ್ವದ ಗೌರವ ಲಭ್ಯವಾಯಿತು. ಕೊನೆಗೆ ಪ್ರವಾದಿ ಮುಹಮ್ಮದ್(ಸ)ರು ಕೂಡಾ ಅವರ ವಂಶದಲ್ಲೇ ಜನ್ಮತಾಳಿದರು.

ಅವರಿಗೆ ನೀಡಲಾದ ಉನ್ನತ ಸ್ಥಾನದ ಕುರಿತು ಪ್ರವಾದಿ ಮುಹಮ್ಮದ್(ಸ)ರಿಂದಲೂ ಪ್ರಸ್ತಾಪವಾಗುತ್ತಿತ್ತು.

ಒಮ್ಮೆ ಒಬ್ಬ ವ್ಯಕ್ತಿ ಬಂದು ಪ್ರವಾದಿ(ಸ)ರನ್ನು "يَا خَيْرَ الْبَرِيَّةِ"– ಓ ಸೃಷ್ಟಿಗಳಲ್ಲಿ ಅತ್ಯುತ್ತಮರಾದವರೇ... ಎಂದು ಕರೆದರು. ಆಗ ಪ್ರವಾದಿ(ಸ) "ذَاكَ إِبْرَاهِيمُ عَلَيْهِ السَّلَام"– ಅದು ಪ್ರವಾದಿ ಇಬ್ರಾಹೀಮ್(ಅ) ಆಗಿದ್ದಾರೆ' ಎಂದು ಹೇಳಿ ಇಬ್ರಾಹೀಮರ ಉನ್ನತ ಸ್ಥಾನಮಾನಕ್ಕೆ ಅವರು ಸಾಕ್ಷ್ಯ ವಹಿಸಿದರು.

(ಸಹೀಹ್ ಮುಸ್ಲಿಮ್, ವರದಿ ಅನಸ್ ಬಿನ್ ಮಾಲಿಕ್(ರ))

ನಮಾಝ್ ಇಸ್ಲಾಮಿನ ಐದು ಸ್ತಂಭಗಳಲ್ಲೊಂದಾಗಿದೆ. ವಿಶ್ವದಾದ್ಯಂತ ಮುಸ್ಲಿಮರು ಐದು ಹೊತ್ತಿನ ನಮಾಝ್ ನಿರ್ವಹಿಸುವಾಗಲೆಲ್ಲಾ ಪ್ರವಾದಿ ಇಬ್ರಾಹೀಮ್(ಅ)ಮತ್ತು ಅವರ ಪುತ್ರರಾದ ಪ್ರವಾದಿ ಇಸ್ಮಾಈಲ್(ಅ)ರು ಒಟ್ಟಿಗೆ ನಿರ್ಮಿಸಿದ ಕಅಬಾ ಭವನದೆಡೆಗೆ ತಿರುಗುತ್ತಾರೆ. ಪ್ರತಿಯೊಂದು ನಮಾಝಿನಲ್ಲೂ ಪಠಿಸಬೇಕಾದಂತಹ ಒಂದು ದುಆದಲ್ಲಿ ಪ್ರವಾದಿ ಇಬ್ರಾಹೀಮ್(ಅ) ಮತ್ತವರ ಕುಟುಂಬಸ್ಥರ ಪ್ರಸ್ತಾಪ ಕೂಡಾ ಇದೆ. ಇದರಿಂದಾಗಿ ಅವರಿಗಿರುವ ಶ್ರೇಷ್ಠತೆಯನ್ನು ಅಂದಾಜಿಸಬಹುದು. ಅವರ ವ್ಯಕ್ತಿತ್ವವು ನೀಡುವ ಪಾಠಗಳ ಪ್ರಸ್ತುತತೆಯ ಪ್ರಾಮುಖ್ಯತೆಯನ್ನು ಕೂಡಾ ಇದರಿಂದ ತಿಳಿಯಬಹುದಾಗಿದೆ.

ಆಗಾಗ ಅವರ ಪ್ರಸ್ತಾಪವಾಗುವಾಗ ಅವರ ಅಸ್ತಿತ್ವವು ಮುಸ್ಲಿಮರಲ್ಲಿ ಜೀವಂತವಾಗುತ್ತದೆ. ಅವರನ್ನು ಒಂದಿಷ್ಟು ಸಮಯದ ಮಟ್ಟಿಗೂ ಮರೆಯಲು ಸಾಧ್ಯವಿಲ್ಲ, ಮರೆಯಬಾರದು ಕೂಡ. ಮರೆಯಲಸಾಧ್ಯವಾಗುವಂಥ ವ್ಯವಸ್ಥೆಯನ್ನು ಆ ಸೃಷ್ಟಿಕರ್ತನೇ ಮಾಡಿದ್ದಾನೆ. ಅಷ್ಟು ಮಾತ್ರವಲ್ಲ ಪ್ರತಿ ವರ್ಷ ಮಕ್ಕಾದಲ್ಲಿ ನಡೆಯುವ 'ಹಜ್ಜ್' ಎಂಬ ಮುಸ್ಲಿಮರ ಬೃಹತ್ ಸಮ್ಮೇಳನದಲ್ಲಿ ನಿರ್ವಹಿಸಲಾಗುವ ಪ್ರತಿ ಕರ್ಮವೂ ಇಬ್ರಾಹೀಮ್(ಅ) ಮತ್ತು ಅವರ ಕುಟುಂಬಕ್ಕೆ ಸಂಬಂಧಪಟ್ಟದ್ದು. ಅವರ ಜೀವನ ಚರಿತ್ರೆ, ಅವರ ಕರ್ಮಭೂಮಿಯ ಚಿತ್ರಣ, ಅವರ ವ್ಯಕ್ತಿತ್ವ, ಅವರ ತ್ಯಾಗ ಬಲಿದಾನ ಇತ್ಯಾದಿಗಳು ಪ್ರತಿ ವರ್ಷವೂ ಜೀವಂತವಾಗುತ್ತದೆ. ಹಜ್ಜ್ ನ ಪ್ರತಿಯೊಂದು ಕರ್ಮವು ಅವರ ಕರ್ಮಗಳ ಪ್ರತಿಬಿಂಬ. ಪ್ರತಿಯೊಂದು ವಿಧಿಯು ಅವರು ನಿರ್ವಹಿಸಿದ ವಿಧಿಗಳ ಸ್ಮರಣಾರ್ಥ.

ಯಹೂದಿಗಳು ಮತ್ತು ಕ್ರೈಸ್ತರು ಕೂಡಾ ಇಬ್ರಾಹೀಮ್(ಅ) ರನ್ನು ಅಪರಿಮಿತವಾಗಿ ಕೊಂಡಾಡುತ್ತಾರೆ. ಬೈಬಲ್ ಮತ್ತು 'ತೌರಾತ್' ನಲ್ಲೂ ಅವರ ಪ್ರಸ್ತಾಪವು ಬಹಳ ಗೌರವದಿಂದ ಬಂದಿದೆ. ಆದರೆ ಅವರ ಪರಂಪರೆಯನ್ನು ಸ್ಮರಿಸಿ ಅದರಂತೆ ನಡೆಯುವ ಪಣತೊಡುವಂತಹ ವಾರ್ಷಿಕ ಬೃಹತ್ ಸಮ್ಮೇಳನವನ್ನು ಆ ಎರಡು ಸಮುದಾಯದವರು ಮಾಡುವುದಿಲ್ಲ. ಇಸ್ಲಾಮ್ ಅಲ್ಲದೆ ಬೇರೆ ಯಾವುದೇ ಜೀವನ ಪದ್ಧತಿಯು ಇಂತಹ ವ್ಯವಸ್ಥೆ ಮಾಡಿಲ್ಲ.

## ಇಬ್ರಾಹೀಮ್(ಅ)ರ ಗೌರವಾರ್ಥ ಅಲ್ಲಾಹನ ಪ್ರಶಂಸೆಯ ಮಹಾಪೂರ

ಸರ್ವ ಲೋಕದ ಪಾಲಕ ಪ್ರಭು ಇಬ್ರಾಹೀಮ್(ಅ)ರನ್ನು ತನ್ನ ಮಿತ್ರನಾಗಿ ಘೋಷಿಸಿ ಅವರ ಸ್ಥಾನವನ್ನು ಅತ್ಯುನ್ನತ ಮಟ್ಟಕ್ಕೆ ಏರಿಸಿದ್ದಾನೆ.

وَاتَّخَذَ اللَّهُ إِبْرَاهِيمَ خَلِيلًا

ಅಲ್ಲಾಹನು ಇಬ್ರಾಹೀಮ್‌ರನ್ನು ತನ್ನ ಮಿತ್ರನಾಗಿಸಿಕೊಂಡಿದ್ದಾನೆ

(ಕುರ್‌ಆನ್–4:125)

ಅವರು ತಮ್ಮ ತಂದೆಯ ದೇವರಾಧಿಕ್ಕಾರದ ಬಗ್ಗೆ ದುಃಖಿತರಾದ ಸಂದರ್ಭವನ್ನು ಪ್ರಸ್ತಾಪಿಸುತ್ತಾ ಅವರೆಷ್ಟು ಕೋಮಲ ಹೃದಯಿ ಎಂದು ಅಲ್ಲಾಹನು ಪ್ರಶಂಸಿಸುತ್ತಾನೆ,

وَمَا كَانَ اسْتِغْفَارُ إِبْرَاهِيمَ لِأَبِيهِ إِلَّا عَنْ مَوْعِدَةٍ وَعَدَهَا إِيَّاهُ فَلَمَّا

تَبَيَّنَ لَهُ أَنَّهُ عَدُوٌّ لِلَّهِ تَبَرَّأَ مِنْهُ ۚ إِنَّ إِبْرَاهِيمَ لَأَوَّاهٌ حَلِيمٌ

ಇಬ್ರಾಹೀಮರು ತಮ್ಮ ಪಿತನಿಗಾಗಿ ಪ್ರಾರ್ಥಿಸಿದ್ದುದು ಅವರು ತಮ್ಮ ಪಿತನೊಂದಿಗೆ ಮಾಡಿದ ವಾಗ್ದಾನದ ಕಾರಣದಿಂದಾಗಿತ್ತು. ಆದರೆ ಅವರ ತಂದೆಯು ಅಲ್ಲಾಹನ ಶತ್ರುವೆಂಬ ವಿಷಯ ಅವರಿಗೆ ಮನವರಿಕೆಯಾದಾಗ ಅವರು ಅವನಿಂದ ಅಸಂತುಷ್ಟರಾದರು. ನಿಶ್ಚಯವಾಗಿಯೂ ಇಬ್ರಾಹೀಮರು ಬಹಳ ಕೋಮಲ ಹೃದಯದವರೂ ಸಹನಶೀಲರೂ ಆಗಿದ್ದರು.

(ಕುರ್‌ಆನ್–9:114)

ಕೋಮಲ ಹೃದಯದೊಂದಿಗೆ ಅವರ ಸಹನಶೀಲತೆ ಮತ್ತು ಅಲ್ಲಾಹನೆಡೆಗೆ ಸದಾ ವಾಲುವ ಅವರ ಸ್ವಭಾವದ ಪ್ರಶಂಸೆಯೂ ಆಗಿದೆ.

إِنَّ إِبْرَاهِيمَ لَحَلِيمٌ أَوَّاهٌ مُنِيبٌ

ವಾಸ್ತವದಲ್ಲಿ ಇಬ್ರಾಹೀಮರು ಸಹನಶೀಲರೂ ಕೋಮಲ ಹೃದಯಿಯೂ ಎಲ್ಲ ಸ್ಥಿತಿಗಳಲ್ಲೂ ನಮ್ಮ ಕಡೆಗೆ ಒಲಿಯುವವರೂ ಆಗಿದ್ದರು.

(ಕುರ್‌ಆನ್–11:75)

ಅಲ್ಲಾಹನ ಮೇಲೆ ಅವರಿಗಿದ್ದ ಅಪೂರ್ವ ಭರವಸೆಯನ್ನು ಕುರ್‌ಆನ್ ಪ್ರಸ್ತಾಪಿಸುತ್ತದೆ,

رَّبَّنَا عَلَيْكَ تَوَكَّلْنَا وَإِلَيْكَ أَنَبْنَا وَإِلَيْكَ الْمَصِيرُ

(ಇಬ್ರಾಹೀಮ್ ಹಾಗೂ ಅವರ ಸಂಗಾತಿಗಳ ಪ್ರಾರ್ಥನೆ ಇದಾಗಿತ್ತು;) "ನಮ್ಮ ಪ್ರಭೂ, ನಾವು ನಿನ್ನ ಮೇಲೆಯೇ ಭರವಸೆಯನ್ನಿರಿಸಿದೆವು, ನಿನ್ನ ಕಡೆಗೇ ನಾವು ವಾಲಿದೆವು ಮತ್ತು ನಿನ್ನ ಸನ್ನಿಧಿಗೇ ನಮಗೆ ಮರಳಲಿಕ್ಕಿದೆ.

(ಕುರ್‌ಆನ್–60:4)

ಅಲ್ಲಾಹನು ಅವರ ಕೃತಜ್ಞತಾ ಮನೋಭಾವವನ್ನು ಕೊಂಡಾಡಿದ್ದಾನೆ,

شَاكِرًا لِّأَنْعُمِهِ ۚ اجْتَبَاهُ وَهَدَاهُ إِلَىٰ صِرَاطٍ مُّسْتَقِيمٍ

ಅಲ್ಲಾಹನ ಕೊಡುಗೆಗಳಿಗೆ ಕೃತಜ್ಞತೆ ಸಲ್ಲಿಸುವವರಾಗಿದ್ದರು. ಅಲ್ಲಾಹನು ಅವರನ್ನು ಆಯ್ದುಕೊಂಡನು ಮತ್ತು ನೇರಮಾರ್ಗವನ್ನು ತೋರಿಸಿದನು.

(ಕುರ್‌ಆನ್–16:121)

ಅವರ ಇಹಪರ ವಿಜಯದ ಸುವಾರ್ತೆಯನ್ನೂ ಅಲ್ಲಾಹನು ನೀಡುತ್ತಾನೆ,

وَآتَيْنَاهُ فِي الدُّنْيَا حَسَنَةً ۖ وَإِنَّهُ فِي الْآخِرَةِ لَمِنَ الصَّالِحِينَ

ನಾವು ಇಹಲೋಕದಲ್ಲಿ ಅವರಿಗೆ(ಇಬ್ರಾಹೀಮರಿಗೆ) ಒಳಿತನ್ನು ದಯಪಾಲಿಸಿದೆವು ಮತ್ತು ಪರಲೋಕದಲ್ಲಿ ಅವರು ನಿಶ್ಚಯವಾಗಿಯೂ ಸಜ್ಜನರಲ್ಲಾಗಿರುವರು.

(ಕುರ್‌ಆನ್–16:122)

ಅವರ ನಿಷ್ಠೆಯನ್ನು ಸೃಷ್ಟಿಕರ್ತನು ಮೆಚ್ಚುಗೆಯಿಂದ ಉಲ್ಲೇಖಿಸುತ್ತಾನೆ,

إِنَّهُ مِنْ عِبَادِنَا الْمُؤْمِنِينَ

ನಿಶ್ಚಯವಾಗಿಯೂ ಅವರು ನಮ್ಮ ಸತ್ಯವಿಶ್ವಾಸಿ ದಾಸರಲ್ಲಾಗಿದ್ದರು.

(ಕುರ್‌ಆನ್–37:111)

ತಮ್ಮ ಪ್ರಭುವಿನ ಕಡೆಯಿಂದ ಅವರಿಗೆ ಸತ್ಯಸಂಧ ಎಂಬ ಬಿರುದು ಕೂಡಾ ಸಿಗುತ್ತದೆ,

وَاذْكُرْ فِي الْكِتَابِ إِبْرَاهِيمَ ۚ إِنَّهُ كَانَ صِدِّيقًا نَّبِيًّا

ಈ ಗ್ರಂಥದಲ್ಲಿ ಇಬ್ರಾಹೀಮರ ಬಗ್ಗೆ ಪ್ರಸ್ತಾಪಿಸಿರಿ. ನಿಶ್ಚಯವಾಗಿಯೂ ಅವರೊಬ್ಬ ಸತ್ಯಸಂಧರೂ ಪ್ರವಾದಿಯೂ ಆಗಿದ್ದರು.

(ಕುರ್‌ಆನ್–19:41)

ಇಬ್ರಾಹೀಮ್ ಮೊಮ್ಮಕ್ಕಳ ಬಗ್ಗೆ ಅತಿ ಹೆಚ್ಚು ಕಳಿಕಳಿಯಿಂದಾಗಿ ಅವರಿಗೆ ನೀಡಿದ ಉಪದೇಶವನ್ನು ಲೋಕದ ಜನರಿಗೆ ಮಾದರಿಯಾಗುವಂತೆ ಸರ್ವಶಕ್ತನು ತನ್ನ ಗ್ರಂಥದಲ್ಲಿ ನಮೂದಿಸುತ್ತಾನೆ,

يَا بَنِيَّ إِنَّ اللَّهَ اصْطَفَىٰ لَكُمُ الدِّينَ فَلَا تَمُوتُنَّ إِلَّا وَأَنْتُمْ مُسْلِمُونَ

ಅವರು (ಇಬ್ರಾಹೀಮ್), "ನನ್ನ ಮಕ್ಕಳೇ, ನಿಶ್ಚಯವಾಗಿಯೂ ಅಲ್ಲಾಹನು ನಿಮಗಾಗಿ ಈ ಧರ್ಮವನ್ನೇ ಆಯ್ದಿರುವನು. ಆದುದರಿಂದ ಕೊನೆಯುಸಿರಿನ ತನಕವೂ ಮುಸ್ಲಿಮರಾಗಿಯೇ ಜೀವಿಸಿರಿ" ಎಂದಿದ್ದರು.

(ಕುರ್‌ಆನ್–2:132)

ಅಲ್ಲಾಹನು ಇಬ್ರಾಹೀಮ್(ಅ)ರ ಗುಣಗಾನದ ಪರಾಕಾಷ್ಠೆ ಎಂಬಂತೆ ಅವರನ್ನು 'ಕಲ್ಬುನ್ ಸಲೀಮ್' ಹೊಂದಿದವರು ಎಂದು ಕೊಂಡಾಡಿದ್ದಾನೆ. 'ಕಲ್ಬುನ್ ಸಲೀಮ್' ಅಂದರೆ 'ನಿರ್ಮಲ ಮನಸ್ಸು'. ವಿಧದ ನೈತಿಕ ದುಷ್ಟತನಗಳು ಮತ್ತು ನಂಬಿಕೆಯ ದೌರ್ಬಲ್ಯಗಳಿಂದ ಮುಕ್ತವಾದ ಪರಿಶುದ್ಧ ಹೃದಯ. ಅಪನಂಬಿಕೆ, ಅನುಮಾನ, ಸಂಕುಚಿತ ಮನೋಭಾವ, ಸ್ವಭಾವದ ವಕ್ರತೆ, ಚಿತ್ತಾಕಾಂಕ್ಷೆ, ದ್ವೇಷ, ಅಸೂಯೆ ಇತ್ಯಾದಿಗಳಿಂದ ಮುಕ್ತವಾದ ಅನನ್ಯ ವ್ಯಕ್ತಿತ್ವ ಇದಕ್ಕಿಂತ ಮಿಗಿಲಾದ ಗೌರವ ಇನ್ನೊಂದಿರಲಿಕ್ಕಿಲ್ಲ. ಅಲ್ಲಾಹನು ಹೀಗೆನ್ನುತ್ತಾನೆ,

إِذْ جَاءَ رَبَّهُ بِقَلْبٍ سَلِيمٍ

ಅವರು(ಇಬ್ರಾಹೀಮ್) ತಮ್ಮ ಪ್ರಭುವಿನ ಸನ್ನಿಧಿಗೆ ನಿರ್ಮಲ ಮನಸ್ಸಿನೊಂದಿಗೆ ಬಂದಾಗ

(ಕುರ್‌ಆನ್–37:84)

## ಇಬ್ರಾಹೀಮ್(ಅ)ರ ಮಾರ್ಗವನ್ನು ಅನುಸರಿಸಬೇಕೆಂಬ ಬಾಧ್ಯತೆ

ಇಬ್ರಾಹೀಮ್(ಅ)ರ ಸಂಪೂರ್ಣ ಜೀವನಗಾಥೆಯು ಅವರ ದೇವಾನುಸಾರಣೆಯ ಸಾಕ್ಷ್ಯವಹಿಸುತ್ತದೆ. ಅಲ್ಲಾಹನಿಗಾಗಿ ಅವರು ತಮ್ಮ

ಸರ್ವಸ್ವವನ್ನೇ ಸಮರ್ಪಿಸಿದ್ದರು. ಆತನಿಗಾಗಿಯೇ ಅವರು ತಮ್ಮ ತಂದೆಯ ವಾತ್ಸಲ್ಯವನ್ನು ತೊರೆದರು. ತಮ್ಮ ಜನಾಂಗದ ವೈರತ್ವವನ್ನು ಕಟ್ಟಿಕೊಂಡರು. ತಮ್ಮ ಮನೆಮಠವನ್ನು ಬಿಟ್ಟುಬಿಟ್ಟರು. ದೇಶ ತೊರೆದರು. ಹೊಸ ಹೊಸ ಕಾರ್ಯಕ್ಷೇತ್ರಗಳನ್ನು ಹುಡುಕುತ್ತಾ ದೇಶಾಟನೆ ಮಾಡಿದರು. ತನ್ನ ಮುಗ್ಧ ಪತ್ನಿ ಮತ್ತು ಹಸುಗೂಸನ್ನು ಮರುಭೂಮಿಯ ಭಯಾನಕತೆಯಲ್ಲಿ ಅವರಷ್ಟಕ್ಕೇ ಬಿಟ್ಟು ಬಿಡಲು ತಯಾರಾದರು. ಅಲ್ಲಾಹನ ಆಜ್ಞಾನುಸರಣೆಗಾಗಿ ತಮ್ಮ ಏಕೈಕನಾದ, ಅತಿ ಪ್ರಿಯ ಪುತ್ರನನ್ನು ಬಲಿನೀಡಲು ಅನುವಾದರು. ಇಷ್ಟೆಲ್ಲಾ ಒಳಿತುಗಳು ವಿಲೀನಗೊಂಡಿರುವ ಆ ತ್ಯಾಗದ ಸಾಕಾರಮೂರ್ತಿಯನ್ನು ಖಂಡಿತವಾಗಿಯೂ ಅನುಸರಿಸಲೇಬೇಕೆಂದು ಆ ಜಗದೊಡೆಯನು ತನ್ನ ದಾಸರಿಂದ ಅಪೇಕ್ಷಿಸುತ್ತಾನೆ.

قُلْ صَدَقَ اللَّهُ ۗ فَاتَّبِعُوا مِلَّةَ إِبْرَاهِيمَ حَنِيفًا وَمَا كَانَ مِنَ الْمُشْرِكِينَ

ಹೇಳಿರಿ (ಓ ಮುಹಮ್ಮದ್), ಅಲ್ಲಾಹನು ನುಡಿದಿರುವುದೆಲ್ಲವನ್ನೂ ಸತ್ಯವಾಗಿಯೇ ನುಡಿದಿದ್ದಾನೆ. ನೀವು ಏಕನಿಷ್ಠೆಯೊಂದಿಗೆ ಇಬ್ರಾಹೀಮರ ಪದ್ಧತಿಯ ಅನುಸರಣೆ ಮಾಡಬೇಕು ಮತ್ತು ಇಬ್ರಾಹೀಮರು ಬಹುದೇವ ವಿಶ್ವಾಸ ಕೈಗೊಂಡವರಲ್ಲಾಗಿರಲಿಲ್ಲ.

(ಕುರ್‌ಆನ್–3:95)

قُلْ إِنَّنِي هَدَانِي رَبِّي إِلَىٰ صِرَاطٍ مُّسْتَقِيمٍ دِينًا قِيَمًا مِّلَّةَ إِبْرَاهِيمَ حَنِيفًا ۚ

وَمَا كَانَ مِنَ الْمُشْرِكِينَ

ಓ ಪೈಗಂಬರರೇ, (ಹೀಗೆ) ಹೇಳಿರಿ: "ನನ್ನ ಪ್ರಭು ನನಗೆ ನೇರ ಮಾರ್ಗವನ್ನು ತೋರಿಸಿದ್ದಾನೆ. ಯಾವುದೇ ವಕ್ರತೆಯಿಲ್ಲದ ಅತ್ಯಂತ ಸರಿಯಾದ ಧರ್ಮ, ಇಬ್ರಾಹೀಮರು ಏಕನಿಷ್ಠೆಯಿಂದ ಕೈಗೊಂಡ ಮಾರ್ಗ– ಅವರು 'ಬಹುದೇವವಿಶ್ವಾಸಿ' ಗಳಲ್ಲಾಗಿರಲಿಲ್ಲ."

(ಕುರ್‌ಆನ್–6:61)

ثُمَّ أَوْحَيْنَا إِلَيْكَ أَنِ اتَّبِعْ مِلَّةَ إِبْرَاهِيمَ حَنِيفًا ۖ وَمَا كَانَ مِنَ الْمُشْرِكِينَ

ಅನಂತರ ನಾವು ನಿಮ್ಮ (ಪ್ರವಾದಿಯ)ಕಡೆಗೆ 'ದಿವ್ಯವಾಣಿ' ಕಳುಹಿಸಿದೆವು, ನೀವು ಏಕನಿಷ್ಠರಾಗಿ ಇಬ್ರಾಹೀಮರ ಪಥದಲ್ಲಿ ನಡೆಯಿರಿ ಮತ್ತು ಅವರು 'ಬಹುದೇವವಿಶ್ವಾಸಿ' ಗಳಲ್ಲಾಗಿರಲಿಲ್ಲ. (ಕುರ್‌ಆನ್–16:123)

وَمَنْ أَحْسَنُ دِينًا مِّمَّنْ أَسْلَمَ وَجْهَهُ لِلَّهِ وَهُوَ مُحْسِنٌ وَاتَّبَعَ مِلَّةَ إِبْرَاهِيمَ حَنِيفًا

ಅಲ್ಲಾಹನಿಗೆ ಶರಣು ಹೋಗಿ ಸುನೀತನಾಗಿ ಏಕನಿಷ್ಠೆಯಿಂದ ಇಬ್ರಾಹೀಮರ ಸಂಪ್ರದಾಯವನ್ನು ಅನುಸರಿಸುವವನಿಗಿಂತ ಉತ್ತಮವಾದ ಜೀವನಪದ್ಧತಿ ಇನ್ನಾರದ್ದಾಗಿರಲು ಸಾಧ್ಯ?

(ಕುರ್‌ಆನ್–4:125)

ಇಬ್ರಾಹೀಮ್(ಅ)ರ ಮಾರ್ಗವನ್ನು ತಿರಸ್ಕರಿಸುವವರನ್ನು ಅಲ್ಲಾಹನು ಮೂರ್ಖರು ಎಂದು ಕರೆದಿದ್ದಾನೆ,

وَمَنْ يَرْغَبُ عَنْ مِلَّةِ إِبْرَاهِيمَ إِلَّا مَنْ سَفِهَ نَفْسَهُ ۚ وَلَقَدِ اصْطَفَيْنَاهُ فِي

الدُّنْيَا ۖ وَإِنَّهُ فِي الْآخِرَةِ لَمِنَ الصَّالِحِينَ

ಇಬ್ರಾಹೀಮರ ಸಂಪ್ರದಾಯವನ್ನು ತಿರಸ್ಕರಿಸುವವನಾರು? ತನ್ನನ್ನು ತಾನೇ ಮೂರ್ಖತನದಲ್ಲಿ ಸಿಲುಕಿಸಿಕೊಂಡಾತನ ಹೊರತು ಬೇರಾರು ಹೀಗೆ ಮಾಡಬಲ್ಲರು? ಇಬ್ರಾಹೀಮರನ್ನು ಇಹಲೋಕದಲ್ಲಿ ನಮ್ಮ ಕಾರ್ಯಕ್ಕಾಗಿ ನಾವು ಆಯ್ಕೆಮಾಡಿಕೊಂಡಿದ್ದೆವು. ಪರದಲ್ಲಿ ಅವರು ಸಜ್ಜನರೊಂದಿಗೆ ಇರುವರು.

(ಕುರ್‌ಆನ್–2:130)

ಪ್ರವಾದಿ ಮುಹಮ್ಮದ್(ಸ)ರೊಡನೆ –ನೀವು ಇವರ ಮಾರ್ಗದ ಅನುಸರಣೆ ಮಾಡಿ ಎಂದು ಅಲ್ಲಾಹನು ಆಜ್ಞಾಪಿಸಿರುವುದು ಇಬ್ರಾಹೀಮ್(ಅ)ರ ಮಾರ್ಗದ ಕುರಿತು ಮಾತ್ರ. ಅದೂ ಕೇವಲ ಒಂದು ಬಾರಿಯಲ್ಲ ಬದಲಾಗಿ ಅನೇಕ ಬಾರಿ ಈ ಆದೇಶವನ್ನು ಪವಿತ್ರ ಕುರ್‌ಆನ್ ಪುನರಾವರ್ತಿಸುತ್ತದೆ. ಬೇರೆ ಯಾವ ಪ್ರವಾದಿಯ ಬಗ್ಗೆಯೂ ಮುಹಮ್ಮದ್(ಸ)ರಿಗೆ ಈ ಆಜ್ಞೆ ನೀಡಲಾಗಿಲ್ಲ.

ಜಗತ್ತಿನ ಯಾವುದೇ ಧಾರ್ಮಿಕ ಗ್ರಂಥದಲ್ಲಿ ಆಯಾ ಧರ್ಮದ ಹೆಸರು ಕಾಣಸಿಗುವುದೇ ಇಲ್ಲ. ಬೈಬಲಿನಲ್ಲಿ ಎಲ್ಲೂ ಕ್ರಿಶ್ಚಿಯನ್ ಎಂಬ ಪದವಿಲ್ಲ, ಹಿಂದೂ ಧರ್ಮಗ್ರಂಥಗಳಲ್ಲೆಲ್ಲೂ ಹಿಂದೂ ಎಂಬ ಪದ ಲಿಖಿತವಾಗಿಲ್ಲ, ಬೌದ್ಧರ ಗ್ರಂಥಗಳಲ್ಲಿ ನೀವೆಲ್ಲರೂ ಬೌದ್ಧರು ಅಂತ ಎಲ್ಲೂ ಪ್ರಸ್ತಾಪಿಸಲಾಗಿಲ್ಲ. ಆದರೆ ಪವಿತ್ರ ಕುರ್‌ಆನ್ ಸ್ವತಃ ತನ್ನ ಅನುಯಾಯಿಗಳನ್ನು ಒಂದು ಪ್ರತ್ಯೇಕ ಹೆಸರಿನಿಂದ ಕರೆದಿದೆ. 'ಮುಸ್ಲಿಮ್' ಎಂಬ ಪದ ವ್ಯತ್ಯಸ್ತ ರೀತಿಯಲ್ಲಿ ಅದೆಷ್ಟೋ ಬಾರಿ ಕುರ್‌ಆನಿನಲ್ಲಿ ಕಾಣಸಿಗುತ್ತದೆ. ಸೃಷ್ಟಿಕರ್ತನ ಬಳಿ ಸ್ವೀಕರಿಸಲಾಗುವ ಜೀವನ ಪದ್ಧತಿ ಇಸ್ಲಾಮ್ ಮಾತ್ರವಾಗಿದೆ ಎಂದು ಕುರ್‌ಆನ್ ಸಾರುತ್ತದೆ.

إِنَّ الدِّينَ عِنْدَ اللَّهِ الْإِسْلَامُ

ಅಲ್ಲಾಹ್‌ನ ಬಳಿಯಲ್ಲಿ (ಸ್ವೀಕಾರಾರ್ಹವಾಧ) ಧರ್ಮವು (ಜೀವನಪದ್ಧತಿ) ಖಂಡಿತವಾಗಿ ಇಸ್ಲಾಮ್ ಮಾತ್ರವೇ ಆಗಿದೆ.

(ಕುರ್‌ಆನ್-3:19)

وَمَنْ يَبْتَغِ غَيْرَ الْإِسْلَامِ دِينًا فَلَنْ يُقْبَلَ مِنْهُ وَهُوَ فِي الْآخِرَةِ مِنَ الْخَاسِرِينَ

ಯಾರಾದರೂ ಇಸ್ಲಾಮಿನ (ಸೃಷ್ಟಿಕರ್ತನಿಗೆ ಸಂಪೂರ್ಣವಾಗಿ ವಿಧೇಯರಾಗುವ) ಹೊರತು ಯಾವುದಾದರೂ ಇತರ ಜೀವನ ಪದ್ಧತಿಯನ್ನು ಸ್ವೀಕರಿಸಲಿಚ್ಛಿಸಿದರೆ, ಅವನ ಆ ಪದ್ಧತಿಯನ್ನು ಎಷ್ಟು ಮಾತ್ರಕ್ಕೂ ಮಾನ್ಯ ಮಾಡಲಾಗದು ಮತ್ತು ಪರಲೋಕದಲ್ಲಿ ಅವನು ವಿಫಲನೂ ಹತಾಶನೂ ಆಗಿ ತೀರುವನು.

-(ಕುರ್‌ಆನ್-3:85)

ಹಾಗಿರುವಾಗ ಇನ್ನೊಂದು ವಿಶೇಷತೆ ಕಂಡು ಬರುವುದೇನೆಂದರೆ ಪವಿತ್ರ ಕುರ್‌ಆನಿನಲ್ಲಿ ಅನೇಕ ಬಾರಿ ಈ ಇಸ್ಲಾಮ್ ಮತ್ತು ಮುಸ್ಲಿಮ್ ಎಂಬ ಪದಗಳೊಂದಿಗೆ ಪ್ರವಾದಿ ಇಬ್ರಾಹೀಮ್(ಅ)ರ ಹೆಸರು ಬಹಳ ಅನನ್ಯವಾಗಿ ಜೋಡಿಸಿರುವುದನ್ನು ಕಾಣಬಹುದು.

مِلَّةَ أَبِيكُمْ إِبْرَاهِيمَ ۚ هُوَ سَمَّاكُمُ الْمُسْلِمِينَ مِنْ قَبْلُ وَفِي هَٰذَا

ನಿಮ್ಮ ಪಿತಾಮಹರಾದ ಇಬ್ರಾಹೀಮರ ಸಮುದಾಯದಲ್ಲಿ ಸ್ಥಿರವಾಗಿರಿ. ಆತನು (ಅಲ್ಲಾಹನು) ಮೊದಲೂ ನಿಮ್ಮ ಹೆಸರನ್ನು 'ಮುಸ್ಲಿಮ್' ಎಂದಿಟ್ಟಿದ್ದನು ಮತ್ತು ಇದರಲ್ಲೂ (ಕುರ್‌ಆನಿನಲ್ಲೂ ನಿಮಗೆ ಇದೇ ಹೆಸರಿದೆ.)

(ಕುರ್‌ಆನ್-22:78)

رَبَّنَا وَاجْعَلْنَا مُسْلِمَيْنِ لَكَ وَمِنْ ذُرِّيَّتِنَا أُمَّةً مُسْلِمَةً لَكَ وَأَرِنَا مَنَاسِكَنَا

وَتُبْ عَلَيْنَا ۖ إِنَّكَ أَنْتَ التَّوَّابُ الرَّحِيمُ

(ಇಬ್ರಾಹೀಮ್(ಅ) ಹೇಳಿದ ಸಂದರ್ಭ) ಪ್ರಭೂ, ನಮ್ಮೀರ್ವರನ್ನು (ನನ್ನನ್ನೂ ಮತ್ತು ಪುತ್ರ ಇಸ್ಮಾಈಲ್‌ನನ್ನು ನಿನ್ನ ಆಜ್ಞಾನುಸಾರಿಗಳಾಗಿ ಮಾಡು. ನಮ್ಮ ಸಂತತಿಯಲ್ಲಿ ನಿನ್ನ ಆಜ್ಞಾನುಸಾರಿಯಾದ ಒಂದು ಸಮುದಾಯವನ್ನು ಎಬ್ಬಿಸು.

(ಕುರ್‌ಆನ್-2:128)

ಇಸ್ಲಾಮ್ ಎಂಬ ಪದದ ಅರ್ಥವೇ ಶರಣಾಗುವುದು ಎಂದಾಗಿದೆ. ಜಗದೊಡೆಯನಿಗೆ ತನ್ನನ್ನು ಸಮರ್ಪಿಸುವುದು. ಸೃಷ್ಟಿಕರ್ತನ ಆಜ್ಞೆಗೆ ಪ್ರಾಧಾನ್ಯತೆ ನೀಡುವುದು. ಆತನ ನಿರ್ದೇಶನಗಳನ್ನು ಸದಾ ಪಾಲಿಸುವುದು. ಪ್ರವಾದಿ ಇಬ್ರಾಹೀಮ್(ಅ)ರ ಸಂಪೂರ್ಣ ಜೀವನವು ಅಲ್ಲಾಹನಿಗೆ ಸಮರ್ಪಿತವಾಗಿತ್ತು. ಸಮರ್ಪಣೆ ಎಂಬುದು ಇಬ್ರಾಹೀಮ್(ಅ)ರ ಮಾರ್ಗದ ನೈಜ ತಿರುಳು. ಅವರ ಜೀವನ ಅದನ್ನು ವ್ಯಾಖ್ಯಾನಿಸಿದ ಜೀವಂತ ಸಾಕ್ಷಿ. ಪವಿತ್ರ ಕುರ್‌ಆನ್ ಅವರ ಅಪ್ರತಿಮ ಸಮರ್ಪಣಾಭಾವವನ್ನು ಉಲ್ಲೇಖಿಸುತ್ತದೆ,

إِذْ قَالَ لَهُ رَبُّهُ أَسْلِمْ ۖ قَالَ أَسْلَمْتُ لِرَبِّ الْعَالَمِينَ

**ಅವರ ಪ್ರಭು ಅವರೊಡನೆ, 'ಮುಸ್ಲಿಮನಾಗು' ಎಂದಾಗ ಅವರು ತಕ್ಷಣ "ನಾನು ವಿಶ್ವದೊಡೆಯನ ಮುಸ್ಲಿಮನಾದೆನು" ಎಂದರು.**

**(ಕುರ್‌ಆನ್–2:131)**

ಅವರೊಡನೆ ಅಲ್ಲಾಹನು 'ಮುಸ್ಲಿಮನಾಗು' ಎಂದು ಆಜ್ಞಾಪಿಸಿದಾಗ, ಅವರು ನಾನು ಜಗದೊಡೆಯನಿಗೆ ಶರಣಾಗಿದ್ದೇನೆ ಎಂದು ಘೋಷಿಸಲು ಒಂದು ಕ್ಷಣವಾದರೂ ತಡಮಾಡಲಿಲ್ಲ.

## ಪ್ರವಾದಿ ಇಬ್ರಾಹೀಮ್(ಅ): ಯಾಕೆ ಸಾರ್ವಕಾಲಿಕ ವ್ಯಕ್ತಿ?

ಪವಿತ್ರ ಕುರ್‌ಆನಿನಲ್ಲಿ ಇಷ್ಟೊಂದು ಗೌರವಾನ್ವಿತ ಸ್ಥಾನ ಪಡೆದ ಇಬ್ರಾಹೀಮ್(ಅ)ರು ಆ ಸ್ಥಾನಕ್ಕೆ ಅರ್ಹರಾಗಿರಬೇಕಾದರೆ ಅವರ ಜೀವನಗಾಥೆ, ಬೋಧನೆಗಳು, ತೀರ್ಮಾನಗಳು, ಪ್ರಬುದ್ಧತೆ, ಅನುಭವಗಳು ಇತ್ಯಾದಿ ಅದೆಷ್ಟು ಅನುಕರಣೀಯವಾಗಿರಬೇಕು? ಆದುದರಿಂದಲೇ ಅವರ ಚರಿತ್ರೆಯು ಇತಿಹಾಸದ ಪುಟಗಳಿಗೆ ಸೀಮಿತವಾಗಲಿಲ್ಲ. ಅದು ಸಾರ್ವಕಾಲಿಕವಾಗಿದೆ. ಇಂತಹ ವ್ಯಕ್ತಿಗಳ ವ್ಯಕ್ತಿತ್ವವು ಸಾರ್ವಕಾಲಿಕವಾಗಲೇಬೇಕು. ಅದು ಎಲ್ಲಾ ಕಾಲದಲ್ಲೂ ಎಲ್ಲಾ ರೀತಿಯ ವ್ಯಕ್ತಿಗಳಿಗೆ ಆದರ್ಶಪ್ರಾಯವಾಗಲೇಬೇಕು. ಸೃಷ್ಟಿಕರ್ತನು ಅವರ ಈ ಅಸಾಧಾರಣ ವ್ಯಕ್ತಿತ್ವದ ಕುರುಹುಗಳನ್ನು ಅಳಿಯ ಬಿಡಲಿಲ್ಲ.

ಜಗತ್ತಿನ ಅರ್ಧಭಾಗಕ್ಕಿಂತಲೂ ಹೆಚ್ಚಿನ ಜನರಿಗೆ ಅವರು ಇಂದಿಗೂ ಪ್ರೀತಿಯ ಪಿತಾಮಹ. ಕ್ರೈಸ್ತರು, ಯಹೂದಿಗಳು ಮತ್ತು ಮುಸ್ಲಿಮರು ಒಟ್ಟಾಗಿ ವಿಶ್ವದ ಜನಸಂಖ್ಯೆಯ 55% ನಷ್ಟಿದ್ದಾರೆ. ಪ್ರಪಂಚದ ಅರ್ಧಭಾಗಕ್ಕಿಂತ ಹೆಚ್ಚು ಜನಸಂಖ್ಯೆಯನ್ನು ಹೊಂದಿರುವ ಈ ಮೂರು ಸಮುದಾಯಗಳಿಗೆ ಪ್ರವಾದಿ ಇಬ್ರಾಹೀಮ್(ಅ) ಸರ್ವ ಕಾಲದಲ್ಲೂ ಅಚ್ಚುಮೆಚ್ಚಿನ ನಾಯಕ.

ಅಲ್ಲಾಹನು ಇಬ್ರಾಹೀಮ್(ಅ)ರನ್ನು ಸಾರ್ವಕಾಲಿಕ ವ್ಯಕ್ತಿ ಎಂದು ಸೂಚಿಸುತ್ತಾ ಆ ಒಬ್ಬ ವ್ಯಕ್ತಿಯು ಒಂದು ಸಂಪೂರ್ಣ ಸಮುದಾಯವೇ ಆಗಿದ್ದಾರೆಂದು ಸಾರಿದ್ದಾನೆ.

إِنَّ إِبْرَاهِيمَ كَانَ أُمَّةً

ವಾಸ್ತವದಲ್ಲಿ ಇಬ್ರಾಹೀಮ್ ಸ್ವಯಂ ತಾನೇ ಒಂದು ಸಮುದಾಯ (ಉಮ್ಮತ್) ಆಗಿದ್ದರು.

(ಕುರ್‌ಆನ್–16:120)

ಪ್ರವಾದಿ ಇಬ್ರಾಹೀಮ್(ಅ)ರ ಜೀವನಗಾಥೆ ಈ ಜಗತ್ತಿಗೆ ಕಲಿಸಿ ಹೋದ ಪಾಠಗಳು ಎಲ್ಲಾ ಕಾಲಕ್ಕೂ ಪ್ರಸ್ತುತ. ಅವರು ಸಮಸ್ಯೆಗಳನ್ನು ಎದುರಿಸದಾಗ ತೋರಿದ ಪ್ರಬುದ್ಧತೆ ಸದಾ ಅನುಕರಣೀಯ. ಅವರ ಜನಪ್ರಿಯತೆಗೆ ಸರಿಸಾಟಿಯಿಲ್ಲ. ಸತ್ಪಥದೆಡೆಗೆ ಅವರು ಜನರನ್ನು ಆಹ್ವಾನಿಸಿದ ರೀತಿ ಅದ್ಭುತವಾದುದು. ಒಬ್ಬ ಉತ್ತಮ ನಾಗರಿಕ, ಅಪ್ರತಿಮ ಸಮಾಜ ಸುಧಾರಕ, ಜವಾಬ್ದಾರಿಯುತ ತಂದೆ, ಸ್ನೇಹಮಯಿ ಪತಿ, ಆದರ್ಶಪ್ರಾಯ ಕ್ರಾಂತಿಕಾರಿ, ಅತಿ ವಿನಮ್ರರಾದ ಧರ್ಮಬೋಧಕ ಮತ್ತು ಜಗತ್ತಿನ ಒಂದು ದೊಡ್ಡ ಭಾಗದ ಜನರಿಗೆ ತಮ್ಮ ಧಾರ್ಮಿಕ ಭಿನ್ನತೆಯ ಹೊರತಾಗಿಯೂ ಇಂದಿಗೂ ಅಚ್ಚುಮೆಚ್ಚಿನ ನಾಯಕರಾದ ಪ್ರವಾದಿ ಇಬ್ರಾಹೀಮ್(ಅ) ಖಂಡಿತವಾಗಿಯೂ ಸಾರ್ವಕಾಲಿಕ ವ್ಯಕ್ತಿಯಾಗಿದ್ದಾರೆ.

❑

# ಹಾಜಿರಾ(ರ)ರ ಅಪ್ರತಿಮ ಮಾದರಿ

ಇಬ್ರಾಹೀಮ್(ಅ)ರ ಚರಿತ್ರೆಯಲ್ಲಿ ಒಂದು ಪ್ರಮುಖ ಅಂಶವಿದೆ. ಅದೇನೆಂದರೆ ಅವರ ಕರ್ತವ್ಯ ನಿರ್ವಹಣೆಯಲ್ಲಿ ಅವರ ಪತ್ನಿ ಹಾಜಿರಾ(ರ)ರ ಸಂಪೂರ್ಣ ಸಹಕಾರದ ಮಾದರಿ. ಆ ಚರಿತ್ರೆಯಲ್ಲಿ ತಾಯಿಯೊಬ್ಬಳು ತನ್ನ ಪುಟ್ಟ ಕಂದನೊಂದಿಗೆ ಒಬ್ಬಂಟಿಗಳಾಗಿ ಮರುಭೂಮಿಯ ಮಧ್ಯದಲ್ಲಿದ್ದುಕೊಂಡು, ತನ್ನಲ್ಲಿದ್ದ ಕನಿಷ್ಠ ಪ್ರಮಾಣದ ಅನ್ನ–ಜಲವು ಮುಗಿದಿದ್ದು ತನ್ನ ಹಾಲುಹಸುಳೆ ಬಾಯಾರಿಕೆಯಿಂದ ಒಂದೇ ಸಮನೆ ಅಳಲು ಪ್ರಾರಂಭಿಸಿದಾಗ ಕಂಗೆಟ್ಟು ಆತಂಕದಿಂದ ಎರಡು ಬೆಟ್ಟಗಳ ನಡುವೆ ದಾಪುಗಾಲು ಹಾಕುತ್ತ ಬೆಟ್ಟಗಳನ್ನೇರಿ ನೀರರಸುವ ಒಂದು ಹೃದಯ ಸ್ಪರ್ಶಿ ಸನ್ನಿವೇಶ ಇದೆ. ಈ ಸನ್ನಿವೇಶವು ಅದೆಷ್ಟು ಮಹತ್ವವಾಗಿತ್ತೆಂದರೆ, ಹಜ್ಜ್ ಎಂಬ ಇಸ್ಲಾಮಿನ ಪ್ರಧಾನ ಆರಾಧನಾ ಕರ್ಮವೊಂದರ ಕಡ್ಡಾಯ ವಿಧಿಗಳಲ್ಲಿ ಒಂದಾಗಿ ಅದು ಮಾರ್ಪಟ್ಟಿತು.

ಈ ಸನ್ನಿವೇಶದ ಮಹತ್ವವು ಕೇವಲ ಮಹಿಳೆಯೊಬ್ಬಳು ತನ್ನ ಮಗುವಿನೆಡೆಗೆ ತಾಯಿ ಸಹಜವಾದ ಮಮತೆಯನ್ನು ಪ್ರದರ್ಶಿಸಿರುವುದಕ್ಕೆ ಸೀಮಿತವಾಗುವುದಿಲ್ಲ ಅಷ್ಟು ಮಾತ್ರವಾಗಿದ್ದರೆ ಅದು ಇತಿಹಾಸದ ಪುಟಗಳಲ್ಲಿ ಸುವರ್ಣಾಕ್ಷರದಲ್ಲಿ ಲಿಖಿತವಾಗುತ್ತಲೂ ಇರಲಿಲ್ಲ ಮತ್ತು ಇಸ್ಲಾಮಿನ ಒಂದು ಪ್ರಮುಖ ಆರಾಧನಾ ಕರ್ಮದ ಕಡ್ಡಾಯ ವಿಧಿಗಳಲ್ಲಿ ಒಂದಾಗಿ ಅದು ಜಾರಿಯಾಗುತ್ತಲೂ ಇರಲಿಲ್ಲ. ಅದು ಮನುಕುಲಕ್ಕೊಂದು ಸಾರ್ವಕಾಲಿಕ ಮಾದರಿಯನ್ನು ತೋರಿಸಿ ಕೊಡುವ ಘಟನೆಯಾಗಿದೆ.

ಹಜ್ಜ್ ಯಾತ್ರೆಯ ತಿರುಳನ್ನು ನೋಡುವುದಾದರೆ ಅಲ್ಲಿ ಪ್ರಾಬಲ್ಯ ಹೊಂದಿರುವುದು ಓರ್ವ ಮಹಿಳೆಯ ತ್ಯಾಗೋಜ್ವಲವಾದ ಜೀವನಗಾಥೆ. ಪ್ರವಾದಿ ಇಬ್ರಾಹೀಮ್(ಅ)ರು ತಮ್ಮ ಪತ್ನಿಯಾದ ಹಾಜಿರ(ರ) ಮತ್ತು ಹಸುಗೂಸಾಗಿದ್ದ ಇಸ್ಮಾಯೀಲ್(ಅ) ರನ್ನು ಬರಡು ಮರುಭೂಮಿಯಲ್ಲಿ ದೇವಾಜ್ಞೆಯ ಪ್ರಕಾರ ಬಿಟ್ಟು ಬಂದಾಗ ಆ ಮಾತೆಯು ಅನುಭವಿಸಿದ ಮಾನಸಿಕ ಗೊಂದಲದ ಸ್ಮರಣೆಯನ್ನು ಹಜ್ಜ್ ಯಾತ್ರಿಕರು ಮಾಡದಿರುತ್ತಾರೆಯೇ?

ಪತಿಯ ಬಗ್ಗೆ ಅತಿ ಹೆಚ್ಚು ಗೌರವವನ್ನು ಹೊಂದಿದ್ದ ಮತ್ತು ಪತಿಯ ಆಜ್ಞೆಯನ್ನು ಮರುಪ್ರಶ್ನಿಸದೆ ಪಾಲಿಸಿದ ಆ ಮಹಿಳಾಮಣಿಯ ಉಪಮೆಯನ್ನು ಸ್ಮರಿಸದ ಹಜ್ಜ್ ಯಾತ್ರಿಕರಿರಬಹುದೇ?

ತನ್ನ ಎಳೆಯ ಕಂದಮ್ಮನ ಬಾಯಾರಿಕೆಯ ಚೀತ್ಕಾರವನ್ನು ತಾಳಲಾರದೆ ನೀರನ್ನರಸುತ್ತಾ ಸಫಾ ಮತ್ತು ಮರ್ವಾ ಬೆಟ್ಟಗಳೆಡೆಯಲ್ಲಿ ದಾಪುಗಾಲು ಹಾಕುತ್ತ ಸಾಗಿದ ಆ ನಿಸ್ಸಹಾಯಕ ಹೆಣ್ಣನ್ನು ಮರೆಯಲಾದೀತೇ?

ಹಜ್ಜ್ ಯಾತ್ರಿಕರು ಮನ ತುಂಬುವಷ್ಟು ಸೇವಿಸಿ, ತಮ್ಮ ಮೈಮೇಲೆಲ್ಲಾ ಸವರಿ, ತಾಯ್ನಾಡಿಗೆ ಹಿಂದಿರುಗುವಾಗ ತಮ್ಮವರಿಗಾಗಿ ಲೀಟರುಗಟ್ಟಲೆ ಹೊತ್ತುಕೊಂಡು ಬರುವ 'ಝಮ್ ಝಮ್' ನೀರು ಕೂಡಾ ಆ ಮಹಿಳೆಯ ಗೌರವಾರ್ಥ, ಸೃಷ್ಟಿಕರ್ತನು ಮರುಳುಗಾಡಿನ ಮಧ್ಯೆ ಹೊರಚಿಮ್ಮಿಸಿದ ಚಿಲುಮೆಯಿಂದ ಪುಟಿಯುವ ಜಲವಾಗಿದೆ ಎಂಬ ಸತ್ಯವನ್ನು ಅಲ್ಲಗಳೆಯಲು ಸಾಧ್ಯವೇ?

ಅಲ್ಲಾಹನ ತೀರ್ಮಾನವನ್ನು ಸ್ವೀಕರಿಸಿ ಆತನು ತನ್ನನ್ನೂ ತನ್ನ ಮಗುವನ್ನೂ ಸಂರಕ್ಷಿಸುವನು ಎಂಬ ವಿಶ್ವಾಸವಿದ್ದರೂ ಕೂಡ ತಾನು ಮಾಡಬೇಕಾದ ಪ್ರಯತ್ನವನ್ನು ತನ್ನ ಸಾಮರ್ಥ್ಯಕ್ಕೂ ಮೀರಿ ನಿರ್ವಹಿಸಿದ ಆ ಮಹಿಳೆಯ ಮಾದರಿ ಜೀವನವನ್ನು ಕೇವಲ ಅವರು ಮಹಿಳೆ ಎಂಬ ಕಾರಣಕ್ಕೆ ನಿರ್ಲಕ್ಷಿಸಲು ಸಾಧ್ಯವಿದೆಯೇ? ಒಬ್ಬಂಟಿಗಳಾಗಿಯೇ ತನ್ನ ಮಗನನ್ನು ಉತ್ತಮ ಸಂತಾನವಾಗಿ ಬೆಳೆಸಿದ ಆ ತಾಯಿಯನ್ನು ಹಜ್ಜ್ ಯಾತ್ರಿಕರು ಜ್ಞಾಪಿಸದಿರುತ್ತಾರೆಯೇ?

ಖಂಡಿತವಾಗಿಯೂ ಇಲ್ಲ! ಹಜ್ಜ್ ಕರ್ಮದ ಪ್ರತಿ ಹಂತದಲ್ಲೂ ಮಹಿಳೆಯೋರ್ವರು ಅಲ್ಲಾಹನ ಮಾರ್ಗದಲ್ಲಿ ತನ್ನ ಸರ್ವಸ್ವವನ್ನೂ ತ್ಯಾಗ ಮಾಡಿದ್ದರೆಂಬ ಸತ್ಯವು ಮನದಟ್ಟಾಗುತ್ತಾ ಹೋಗುತ್ತದೆ. ಒಟ್ಟಿನಲ್ಲಿ ಹಜ್ಜ್ ಯಾತ್ರಿಕರು ಹಜ್ಜ್‌ನ ಪ್ರತಿ ಕರ್ಮವನ್ನು ನಿರ್ವಹಿಸುವಾಗಲೆಲ್ಲಾ ಮಹಿಳೆಗೆ ಅಲ್ಲಾಹನು ನೀಡಿದ ಸ್ಥಾನಮಾನವನ್ನು ಅಲ್ಲಗಳೆಯಲೂ ನಿರ್ಲಕ್ಷಿಸಲೂ ಸಾಧ್ಯವೇ ಇಲ್ಲ.

'ಹಾಜಿರಾ' ಎಂಬ ಪದವನ್ನು 'ಮಹಿಳೆ' ಅಂತ ಅನುವಾದಿಸಿದರೆ ಅದು ತಪ್ಪಾಗಲಾರದು. ಏಕೆಂದರೆ ಹಾಜಿರಾ(ರ)ರು ಎಲ್ಲಾ ಕಾಲದ ಮಹಿಳೆಯರಿಗೊಂದು ಆದರ್ಶ. ಒಬ್ಬ ಮಹಿಳೆಯು ವಾಸ್ತವದಲ್ಲಿ ಹೇಗಿರಬೇಕು ಎಂಬುದನ್ನು ಅವರ ಜೀವನವು ತೋರಿಸಿಕೊಡುತ್ತದೆ. ಈ ಲೋಕವು ಸಾಮಾನ್ಯವಾಗಿ ತಿಳಿದಂತೆ ಮಹಿಳೆ ದುರ್ಬಲಳಲ್ಲ. ಆಕೆ ಸದಾ ಭಯದೊಂದಿಗೆ ಜೀವಿಸುವ ಅಂಜುಬುರುಕಿಯಲ್ಲ. ತನ್ನೆಲ್ಲಾ ಕೆಲಸಗಳಲ್ಲೂ ಪುರುಷನ ಸಹಾಯ ಯಾಚಿಸುವ ಪರಾವಲಂಬಿಯಲ್ಲ. ನಿರ್ಣಾಯಕ ಕ್ಷಣಗಳಲ್ಲಿ ದಿಟ್ಟನಿಲುವನ್ನು ತೆಗೆದುಕೊಳ್ಳಲು ಅನರ್ಹಳಾದವಳೂ ಅಲ್ಲ. ಬದಲಾಗಿ ಆಕೆ ಮಹತ್ಕಾರ್ಯಗಳನ್ನು ಸಾಧಿಸಿ ತೋರಿಸುವ ಎದೆಗಾರಿಕೆ ಇರುವವಳು. ಆಕೆ ಜವಾಬ್ದಾರಿಕೆಯ ಹೊರೆಹೊರಲು ಹಿಂಜರಿಯದವಳು. ಹೊಣೆಗಾರಿಕೆಗಳನ್ನು ಅತ್ಯುತ್ತಮ ರೀತಿಯಲ್ಲಿ ನಿರ್ವಹಿಸಿ

ತೋರಿಸಬಲ್ಲವಳು. ಕಷ್ಟಕಾರ್ಪಣ್ಯಗಳನ್ನು ಧೈರ್ಯದೊಂದಿಗೆ ಎದುರಿಸಬಲ್ಲವಳು. ಪ್ರತಿಕೂಲ ಪರಿಸ್ಥಿತಿ ತಲೆದೋರಿದಾಗ ನಿರ್ಭಯಳು ಎಂಬಿತ್ಯಾದಿ ಅದ್ಭುತವಾದ ಪಾಠಗಳನ್ನು ಹಾಜಿರಾ(ರ)ರ ಜೀವನಗಾಥೆಯು ಕಲಿಸಿ ಕೊಡುತ್ತದೆ.

ಮಕ್ಕಾ ಎಂಬ ಮರುಭೂಮಿಯಲ್ಲಿ ಅವರನ್ನು ಬಿಟ್ಟು ಬಂದು ತದನಂತರ ನಡೆದ ಘಟನೆಗಳ ಒಟ್ಟು ಅವಲೋಕನ ಮಾಡಿದರೆ ಇದರಿಂದ ನಾವು ಜೀವನದಲ್ಲಿ ಅಳವಡಿಸಬೇಕಾದ ಅನೇಕ ವಿಷಯಗಳನ್ನು ಗ್ರಹಿಸಬಹುದು. ಹಾಜಿರಾ(ರ)ರು ಕೇವಲ ಮಹಿಳೆಯರಿಗೆ ಮಾದರಿಯಲ್ಲ. ಅವರು ಮನುಕುಲಕ್ಕೇ ಒಂದು ಆದರ್ಶ.

ಹಾಜಿರಾ(ರ)ರು ತಮ್ಮ ನಾಡನ್ನು ಬಿಟ್ಟು ಆ ಬಂಜರು ನೆಲದಲ್ಲಿ ವಾಸಿಸಲು ಸಿದ್ಧರಾದರು. ಇದು ಅವರು ತನ್ನ ಸೃಷ್ಟಿಕರ್ತನ ಮೇಲೆ ಇರಿಸಿದ ಅಪ್ರತಿಮ ವಿಶ್ವಾಸದ ದೃಷ್ಟಾಂತವಲ್ಲದೆ ಇನ್ನೇನು! ಈ ಕೃತ್ಯದಿಂದಾಗಿ ಅವರು ಪ್ರದರ್ಶಿಸಿದ ತ್ಯಾಗಗಳೆಲ್ಲ ಬಹಳ ಸ್ಪಷ್ಟವಾಗಿ ನಮ್ಮ ಕಣ್ಣಿಗೆ ಬೀಳುತ್ತದೆ. ತಮ್ಮ ನಾಡು, ಸುಖ ಸೌಕರ್ಯಗಳು, ಸಂತೋಷ, ಪತಿ ಎಲ್ಲವನ್ನು ತ್ಯಜಿಸಲು ಸಿದ್ಧರಾಗಿಯೇ ಅವರು ಮರುಭೂಮಿಯ ವಾಸವನ್ನು ಸ್ವೀಕರಿಸಿದ್ದು. ಗಮನಹರಿಸಬೇಕಾದ ವಿಷಯವೇನೆಂದರೆ ಎಲ್ಲವನ್ನ ತ್ಯಜಿಸಿ ಕೂತಾಗಲೂ ಸಂಕಷ್ಟಗಳ ಸುರಿಮಳೆ ನಿಲ್ಲಲಿಲ್ಲ. ಆಗ ಅವರು ಇನ್ನೊಂದು ವಸ್ತುವನ್ನು ತ್ಯಜಿಸಿದರು. ಅದು ಅವರ ಬಳಿ ಇದ್ದ ಶೂನ್ಯತೆ. ಏನೂ ಇಲ್ಲದ ಪರಿಸ್ಥಿಯಲ್ಲಿ ಅವರು ತಮ್ಮ ದೈನ್ಯ ಸ್ಥಿತಿಯನ್ನೇ ತ್ಯಜಿಸಿ ಆಶಾಭಾವನೆಯನ್ನು ಪ್ರದರ್ಶಿಸಿದರು. ತಮ್ಮ ಶೂನ್ಯತೆಯನ್ನು ತ್ಯಾಗ ಮಾಡಿದ ಈ ಕೃತ್ಯವೇ ಈ ಚರಿತ್ರೆಯ ಅತ್ಯದ್ಭುತವಾದ ಭಾಗ.

ಸಾಮಾನ್ಯವಾಗಿ ಇಂತಹ ಪರಿಸ್ಥಿತಿಯಲ್ಲಿ ಮನುಷ್ಯ ನಿರಾಶೆಯಿಂದ ಕಂಗೆಟ್ಟು ಹೋಗುತ್ತಾನೆ. ಹಾಜಿರಾ(ರ)ರಂತಹ ಮನಃಸ್ಥಿತಿ ಇರಬೇಕಾದರೆ ಮಾನಸಿಕ ಸ್ಥೈರ್ಯದ ಅತ್ಯುನ್ನತ ಮಟ್ಟಬೇಕು. ಆಶಾಭಾವನೆಯನ್ನು ಮನದಲ್ಲಿರಿಸಿ ಅವರು ಆಕಾಶದೆಡೆಗೆ ನೋಟ ಹರಿಸುತ್ತಾ ಇನ್ನು ದೈವಿಕ ಸಹಾಯವು ಇಳಿಯುತ್ತದೆ ಎಂದು ಅಲ್ಲಿ ಸುಮ್ಮನೆ ಕೂತು ಬಿಡಲಿಲ್ಲ. ತನ್ನ ಪತಿ ತನ್ನನ್ನು ತ್ಯಜಿಸಿ ಹೇಗೆ ಹೋದರು ಎಂದು ಮರುಗಿ ಅಳುತ್ತಾ ಕೂರಲಿಲ್ಲ. ಈ ಹೀನಾಯ ಪರಿಸ್ಥಿತಿಯಲ್ಲೂ ನನ್ನ ಸಹಾಯಕ್ಕೆ ಯಾರೂ ಇಲ್ಲ ಎಂದು ಗೋಳಾಡಲೂ ಇಲ್ಲ. ಬದಲಾಗಿ ಅಲ್ಲಿಂದ ಎದ್ದರು. ದಾಪುಗಾಲು ಹಾಕಿದರು. ಪರಿಸ್ಥಿತಿ ಹದಗೆಡುವುದಕ್ಕಿಂತ ಮುಂಚೆ ಎಲ್ಲಾದರೂ ಜೀವ ಗೋಚರಿಸುತ್ತದೋ ಎಂದು ನೋಡಲು ಅತ್ತಿಂದಿತ್ತ ಚುರುಕಾಗಿ ನಡೆದರು. ಬೆಟ್ಟಗಳನ್ನು ಏರಿದರು. ಏಳನೇ ಸಲ ಬೆಟ್ಟವೇರಿದಾಗ ಚಿಲುಮೆ ಪುಟಿಯದೆ ಇದ್ದಿದ್ದರೆ ಅದೆಷ್ಟು ಬಾರಿ ಪ್ರಯತ್ನಿಸುತ್ತಿದ್ದರೋ ಏನೋ.

ಇಲ್ಲಿ ಹಾಜಿರಾ(ರ)ರು ಪ್ರದರ್ಶಿಸಿದ ಅನನ್ಯ ಕಾರ್ಯವು ಆ ಸಂದರ್ಭ

ತಲೆದೋರಿದ ಸಮಸ್ಯೆಯ ಬಗ್ಗೆ ಅವರು ಹೆಚ್ಚು ಆತಂಕಗೊಳ್ಳಲಿಲ್ಲ ಎಂಬುದನ್ನು ಮಾತ್ರವಲ್ಲ ಬದಲಾಗಿ ಒಂದು ಸಮಸ್ಯೆಯ ಪರಿಹಾರಕ್ಕೆ ದೈವಿಕ ಸಹಾಯವು ಬೇಕಾದರೆ ಮಾನವನು ಶ್ರಮ ಪಡಬೇಕಾದುದು ಅತ್ಯವಶ್ಯಕ ಎಂಬುದನ್ನು ಅವರು ಬೋಧಿಸಿದರು. ಹಜ್ಜ್ ಮತ್ತು ಉಮ್ರಾ ಮಾಡುವವರು ಹಾಜಿರಾ(ರ)ರು ಏರಿಳಿದ ಈ ಎರಡು ಬೆಟ್ಟಗಳ ನಡುವೆ ನಡೆಯಬೇಕಾದ ಕುರಿತು ಪವಿತ್ರ ಕುರ್‌ಆನ್ ಹೀಗೆ ಹೇಳುತ್ತದೆ.

إِنَّ الصَّفَا وَالْمَرْوَةَ مِنْ شَعَائِرِ اللَّهِ ۖ فَمَنْ حَجَّ الْبَيْتَ

أَوِ اعْتَمَرَ فَلَا جُنَاحَ عَلَيْهِ أَنْ يَطَّوَّفَ بِهِمَا ۚ

"ನಿಶ್ಚಯವಾಗಿಯೂ 'ಸಫಾ' ಮತ್ತು 'ಮರ್ವಾ' ಗಳು ಅಲ್ಲಾಹನ ಸಂಕೇತಗಳಲ್ಲಾಗಿರುತ್ತದೆ. ಆದುದರಿಂದ ಪವಿತ್ರ ಭವನದ ಹಜ್ಜ್ ಯಾ ಉಮ್ರಾ ಮಾಡುವಾತನು ಆ ಎರಡು ಬೆಟ್ಟಗಳ ನಡುವೆ 'ಸಈ' ಮಾಡುವುದರಲ್ಲೇನೂ ದೋಷವಿಲ್ಲ".

(ಕುರ್‌ಆನ್–2:158)

ಪವಿತ್ರ ಕುರ್‌ಆನ್ ಈ ಒಂದು ಸ್ಥಳದಲ್ಲಿ ಮಾತ್ರ ಇದರ ಕುರಿತು ಪ್ರಸ್ತಾಪಿಸಿದೆ. ಆದರೆ ಈ ಸೂಕ್ತಕ್ಕಿಂತ ಮೊದಲು ಬರುವ 5 ಸೂಕ್ತಗಳಲ್ಲಿ ತ್ಯಾಗ ಮತ್ತು ಸಹನೆಯನ್ನು ಸವಿವರವಾಗಿ ಬೋಧಿಸಲಾಗಿದೆ.

"ಓ ಸತ್ಯವಿಶ್ವಾಸಿಗಳೇ, ಸಹನೆ ಮತ್ತು ನಮಾಝಿನ ಮೂಲಕ ಅಲ್ಲಾಹನ ಸಹಾಯ ಪಡೆಯಿರಿ, ನಿಶ್ಚಯವಾಗಿಯೂ ಅಲ್ಲಾಹ್ ಸಹನಶೀಲರೊಂದಿಗಿದ್ದಾನೆ. ಅಲ್ಲಾಹನ ಪಥದಲ್ಲಿ ವಧಿಸಲ್ಪಡುವವರನ್ನು ಮೃತರೆನ್ನಬೇಡಿರಿ, ಅವರು ವಾಸ್ತವದಲ್ಲಿ ಜೀವಂತವಿದ್ದಾರೆ, ಆದರೆ ಅವರ ಜೀವನದ ಅರಿವು ನಿಮಗಾಗುವುದಿಲ್ಲ. ನಾವು ನಿಮ್ಮನ್ನು ಭಯಾಶಂಕೆ, ಹಸಿವು, ಧನಹಾನಿ, ಜೀವಹಾನಿ ಮತ್ತು ಉತ್ಪನ್ನಗಳ ನಾಶಗಳಿಗೊಳಪಡಿಸಿ ಅವಶ್ಯವಾಗಿಯೂ ಪರೀಕ್ಷಿಸುವೆವು, ಇಂತಹ ಸನ್ನಿವೇಶಗಳಲ್ಲಿ ತಾಳ್ಮೆ ವಹಿಸಿದವರಿಗೆ ಸುವಾರ್ತೆ ನೀಡಿರಿ. ಅಂತಹವರ ಮೇಲೆ ವಿಪತ್ತೇನಾದರೂ ಎರಗಿದಾಗ ಅವರು "ನಿಶ್ಚಯವಾಗಿಯೂ ನಾವು ಅಲ್ಲಾಹನವರು ಮತ್ತು ಅಲ್ಲಾಹನೆಡೆಗೆ ನಮಗೆ ಮರಳಲಿಕ್ಕಿದೆ" ಎನ್ನುವರು. ಅವರ ಮೇಲೆ ಅವರ ಪ್ರಭುವಿನ ಕಡೆಯಿಂದ ಮಹಾ ಅನುಗ್ರಹಗಳಿರುವುವು. ಅವನ ಕಾರುಣ್ಯವು ಅವರನ್ನು ಆಚ್ಛಾದಿಸುವುದು ಮತ್ತು ಇಂತಹವರೇ ಸನ್ಮಾರ್ಗ ಹೊಂದಿದವರಾಗಿರುತ್ತಾರೆ.

(ಕುರ್‌ಆನ್–2:153–157)

ತ್ಯಾಗ ಮತ್ತು ಸಹನೆಯ ಇಷ್ಟು ಸುದೀರ್ಘವಾದ ಬೋಧನೆಯ ನಂತರವೇ ಸಫಾ ಮತ್ತು ಮರ್ವಾಗಳ ನಡುವೆ 'ಸಈ' ಮಾಡುವ ಕುರಿತು ಪ್ರಸ್ತಾಪಿಸಲಾಗಿದೆ. ಎಂತಹಾ ಸಂದರ್ಭ ಬಂದರೂ ಕೈಕಟ್ಟಿ ಕುಳಿತುಕೊಂಡು ಹೀನಾಯ ಅವಸ್ಥೆಯ ಬಗ್ಗೆ ಪ್ರಲಾಪ ಮಾಡುತ್ತಾ ಎಲ್ಲೆಲ್ಲೂ ನಿರಾಶಾವಾದವನ್ನು ಪಸರಿಸಬಾರದು, ಬದಲಾಗಿ,ಎಚ್ಚೆತ್ತು ಆಶಾವಾದದೊಂದಿಗೆ ಕಣಕ್ಕಿಳಿದು ಪರಿಶ್ರಮಿಸಬೇಕು ಎಂಬ ಪಾಠವನ್ನು ಇದು ನೀಡುತ್ತದೆ. ಹಾಗೆ ಮಾಡಿದರೆ ದೇವನ ಸಹಾಯವು ಖಂಡಿತ ಬಂದೆರಗುತ್ತದೆ. ಅದೇ ಪ್ರಕೃತಿ ಕಾನೂನು. ಅದೇ ಸೃಷ್ಟಿಕರ್ತನ ನಿಯಮ.

ಹಾಜಿರಾ(ರ)ರ ಈ ಜೀವನಗಾಥೆಯಿಂದ ಪಡೆಯಬಹುದಾದ ಅನೇಕ ಪಾಠಗಳು ನಮ್ಮ ಮುಂದಿದೆ. ಮುಖ್ಯವಾದವುಗಳನ್ನು ಪ್ರಸ್ತಾಪಿಸುವುದಾದರೆ ಮೊದಲನೆಯದ್ದು 'ತವಕ್ಕುಲ್'- ಅಲ್ಲಾಹನ ಮೇಲೆ ಅಪರಿಮಿತ ಭರವಸೆ. ಪತಿಯು ಬಿಟ್ಟು ಹೋಗುವಾಗ ಅವರ ಬೆಂಬತ್ತಿ, ಹಿಡಿದು ನಿಲ್ಲಿಸಿ ನಮ್ಮನ್ನು ಉಪೇಕ್ಷಿಸಿ ಹೋಗಬೇಡಿ ಎಂದು ಯಾಚಿಸುವ ಮನಸ್ಸಾಗಿರಬಹುದು ಹಾಜಿರಾ(ರ)ರಿಗೆ. ಆದರೆ ಅದು ಅಲ್ಲಾಹನ ಆಜ್ಞೆ ಎಂದು ತಿಳಿದಾಕ್ಷಣ ಆ ಮಹಿಳಾಮಣಿಗೆ ಸೃಷ್ಟಿಕರ್ತನಲ್ಲಿರುವ ಭರವಸೆಯೇ ಮೇಲುಗೈ ಸಾಧಿಸಿತು. ಎರಡನೆಯ ಪಾಠ ತನ್ನ ಸಹಾಯಕ್ಕೆ ಸ್ವತಃ ತಾನೇ ಅಣಿಯಾಗಬೇಕು ಎಂಬುದಾಗಿದೆ. ಇದ್ದಲ್ಲೇ ಕೂತುಬಿಟ್ಟರೆ ಎಲ್ಲಿಂದಲೂ ಸಹಾಯ ದೊರಕಲಾರದು. ಸೃಷ್ಟಿಕರ್ತನ ಸಹಾಯ ಬರಬೇಕಾದರೂ ನಾವು ಸ್ವತಃ ಚಲಿಸಲು ಪ್ರಾರಂಭಿಸಬೇಕು. ಮೂರನೆಯದು ಅಲ್ಲಾಹನು ಖಂಡಿತವಾಗಿಯೂ ಸಹನೆ ಮತ್ತು ತ್ಯಾಗದ ಪ್ರತಿಫಲವನ್ನು ನೀಡಿಯೇ ತೀರುತ್ತಾನೆ. ಆತನ ಮೇಲೆ ಭರವಸೆ ಇರಿಸಿದವರನ್ನು ಆತನೆಂದೂ ಪರಿತ್ಯಜಿಸುವುದಿಲ್ಲ ಎಂಬುದಾಗಿದೆ.

ಹಾಜಿರಾ(ರ)ರ ಮಾದರಿಯನ್ನು ಅನುಸರಿಸಬೇಕಾದರೆ ಅವರ ತ್ಯಾಗವನ್ನು ಅರಿಯಬೇಕು. ನಮಗಿಷ್ಟವಾದ ವಸ್ತುವನ್ನು ತ್ಯಜಿಸುವುದು ಮಾತ್ರ ತ್ಯಾಗವಲ್ಲ ಬದಲಾಗಿ ಏನ ಇಲ್ಲದ ಪರಿಸ್ಥಿತಿಯಲ್ಲಿ ನಮ್ಮ ಬಳಿ ಇರುವ ಶೂನ್ಯತೆಯನ್ನು ತ್ಯಜಿಸಬೇಕು. ನಮ್ಮನ್ನು ನಾವು ಪರಿಸ್ಥಿತಿಯ ಬಲಿಪಶುವಾಗಲು ಖಂಡಿತವಾಗಿಯೂ ಬಿಡಬಾರದು. ಕೃತಜ್ಞತೆ, ತ್ಯಾಗ ಮತ್ತು ಸಹನೆಯ ಸರಿಯಾದ ಅರ್ಥ ತಿಳಿಯಲು ಪ್ರಯತ್ನಿಸಬೇಕು. ಆ ಮಾತೆಯು ಅತ್ಯಂತ ದುರ್ಬಲ ಪರಿಸ್ಥಿತಿಯಲ್ಲೂ ಪ್ರದರ್ಶಿಸಿದ ಆ ಮಹಾಶಕ್ತಿಯು ಖಂಡಿತವಾಗಿಯೂ ಮನು ಕುಲಕ್ಕೊಂದು ಮಾದರಿಯಾಗಿದೆ.

